# ಬಾಲರಾಮಾಯಣ

(ಯುದ್ಧಕಾಂಡ ಪೂರ್ವಭಾಗ)

ಸಂಪುಟ ೪

ಲೇಖಕ :
ನಾರಾಯಣರಾವ ತಾಳೀಕೋಟೆ
ರಾಯಚೂರು

ಪ್ರಕಾಶಕರು :
ಶ್ರೀರಾಮ ಸೇವಾ ಟ್ರಸ್ಟ್, ರಾಯಚೂರು
ಧಾರ್ಮಿಕ ಗ್ರಂಥ ಪ್ರಕಾಶನ ವಿಭಾಗ

ಶ್ರೀ ರಾಮ ಸೇವಾ ಟ್ರಸ್ಟಿನ
ಐದನೆಯ ಕುಸುಮ

ಪ್ರಥಮ ಮುದ್ರಣ, ೧೯೭೮
(೧೦೦೦ ಪ್ರತಿಗಳು)



**ಬೆಲೆ: ರೂ. ೭–೦೦**

**ಮುಖಪುಟ : ಶ್ರೀ ಜಿ. ಕೆ. ಮೂರ್ತಿ, ಧಾರವಾಡ**

**ಪ್ರಕಾಶಕರು : ಶ್ರೀರಾಮ ಸೇವಾಟ್ರಸ್ಟ್, ರಾಯಚೂರು**
(ಧಾರ್ಮಿಕ ಗ್ರಂಥ ಪ್ರಕಾಶನ ವಿಭಾಗ)
ಮುದ್ರಕರು : ಪ್ರತಿಭಾ ಮುದ್ರಣ, ಧಾರವಾಡ

# ಪ್ರಕಾಶಕರ ನುಡಿ

ಆದಿಕವಿ ವಾಲ್ಮೀಕಿ ಮಹರ್ಷಿಗಳ ರಾಮಾಯಣವು ಭಾರತೀಯ ಜೀವನದ ಒಂದು ಭಾಗವಾಗಿದೆ. ಸಹೃದಯ ಓದುಗರ ಹೃನ್ಮನಗಳನ್ನು ತಣಿಸಿದೆ. ಭಾರತೀಯ ಸಂಸ್ಕೃತಿಗೆ ಕನ್ನಡಿಯನ್ನು ಹಿಡಿದು ಭಾರತದ ಹಿರಿಮೆಯನ್ನು ತೋರಿಸಿದೆ. ಆದರೆ ಸಂಸ್ಕೃತವನ್ನು ಬಲ್ಲ ಪಂಡಿತರಿಗೆ ಮಾತ್ರ ಅದನ್ನು ಓದಲು ಅನುಕೂಲವಾಯಿತು.

ಕನ್ನಡಿಗರಿಗೂ ಈ ಮಹಾಕವಿಯ ದರ್ಶನವಾಗಬೇಕೆಂಬ ಇಚ್ಛೆಯಿಂದ ಕನ್ನಡದ ಕವಿಗಳನೇಕರು ರಾಮಾಯಣಗಳನ್ನು ರಚಿಸಿದರು. ತಮಗೆ ಯೋಗ್ಯಕಂಡ ರೀತಿಯಲ್ಲಿ ಮಾರ್ಪಾಟುಗಳನ್ನು ಮಾಡಿಕೊಂಡರು. ಇವೂ ಕೂಡ ಸಾಮಾನ್ಯ ಕನ್ನಡಿಗನಿಗೆ ಅರ್ಥವಾಗದಷ್ಟು ಕ್ಲಿಷ್ಟವಾಗಿವೆ.

ಜನಸಾಮಾನ್ಯರಿಗೆ, ವಿಶೇಷವಾಗಿ ಬಾಲ-ಬಾಲಕಿಯರಿಗೆ ತಾವೇ ಓದಿಕೊಂಡು ಹಾಡಲು ಅನುಕೂಲವಾಗಲೆಂದು ಶ್ರೀ ನಾರಾಯಣರಾವ ತಾಳೀಕೋಟೆ ಇವರು, ಪ್ರಸ್ತುತ ಬಾಲರಾಮಾಯಣವನ್ನು ಆದಿಕವಿಯ ಮಾರ್ಗವನ್ನೇ ಹಿಡಿದು ಸ್ವತಂತ್ರವಾದ ಕೃತಿಯನ್ನು ರಚಿಸಿದ್ದಾರೆ. ಸುಲಲಿತವಾದ ಸರಲಭಾಷೆಯಲ್ಲಿ ಬರೆದ ಚತುಷ್ಪದಿಗಳು ಸಾಮಾನ್ಯನಿಗೂ ರಾಮಾಯಣದ ಸಾರಸರ್ವಸ್ವವನ್ನು ನೀಡಬಲ್ಲವು.

ಈ ಲೇಖಕರ ಕನ್ನಡ "ಶ್ರೀಭಗವದ್ಗೀತೆ"ಯು ಪ್ರಪ್ರಥಮವಾಗಿ ನಮ್ಮ ಪ್ರಕಾಶನ ವಿಭಾಗದಿಂದ ಈಗಾಗಲೇ ಪ್ರಕಾಶಿತವಾಗಿದೆ. ಅದಕ್ಕೆ ಎಲ್ಲ ಕಡೆಯಿಂದಲೂ ಒಳ್ಳೆಯ ಪ್ರತಿಕ್ರಿಯೆ ಬಂದಿದೆ.

ಬಾಲರಾಮಾಯಣದ ಈ ನಾಲ್ಕನೆಯ ಸಂಪುಟಕ್ಕಾಗಿ ಫರೂಕ ಅನ್ವರ ಕಂಪನಿಯ ಮಾಲಿಕರಾದ ಶ್ರೀ ಗಫಾರಶೇಠರು ಉದಾರ ಧನ ಸಹಾಯ ಮಾಡಿದ ಕಾರಣ, ಈ ಸಂಪುಟವು ಇಷ್ಟು ಶೀಘ್ರ ಹೊರಗೆ ಬರಲು ಅನುಕೂಲವಾಯಿತು. ಅವರಿಗೂ ಅಲ್ಲದೆ ನಮಗೆ ಪ್ರಕಟಿಸಲು ಅವಕಾಶ

ಇತ್ಯಾದಕ್ಕಾಗಿ ಲೇಖಕರಾದ ಶ್ರೀ ನಾರಾಯಣರಾವ ತಾಳೀಕೋಟಿ ಇವರಿಗೂ ನಮ್ಮ ಕೃತಜ್ಞತೆಗಳು. ಧಾರವಾಡದ ಪ್ರತಿಭಾ ಮುದ್ರಣಾಲಯದ ಒಡೆಯರಾದ ಶ್ರೀ ಫಾಣೇಕರರಿಗೂ ಧನ್ಯವಾದಗಳು.

ಬಾಲರಾಮಾಯಣದ ನಂತರ ಇದೇ ಲೇಖಕರು ಬರೆದ ಬಾಲ ಮಹಾಭಾರತವನ್ನು ಪ್ರಕಟಿಸುವ ವಿಚಾರವಿದೆ. ಆರ್ಥಿಕ ಅನುಕೂಲ ವಾದರೆ ಅದೂ ಸಾಧ್ಯವಾಗಬಹುದು.

ಎಂದಿನಂತೆ ಓದುಗರ, ಭಕ್ತರ, ಪ್ರೋತ್ಸಾಹವೇ ನಮ್ಮ ಬಲ. ನಮ್ಮ ಸೇವೆಯು ಅವರಿಗೆ ಮೀಸಲು. ಭಗವಂತನು ಎಲ್ಲರಿಗೂ ಕಲ್ಯಾಣ ಮಾಡಲಿ.

ರಾಯಚೂರು
ತಾ. ೧೬-೪-೭೮
ಶ್ರೀರಾಮ ನವಮಿ

ಡಾ. ಎ. ಶಂಕರ
ಎಸ್ ಜಿ. ಲೋಖಂಡೆ, ಎಂಜಿನಿಯರ
ನಾರಾಯಣರಾವ ತಾಳೀಕೋಟಿ, ಎಡ್ವೋಕೇಟ
ಧರ್ಮದರ್ಶಿಗಳು
ಶ್ರೀರಾಮ ಸೇವಾ ಟ್ರಸ್ಟ್, ರಾಯಚೂರು

# ಲೇಖಕರ ನುಡಿ

ವಿಶ್ವದ ಆದಿಕವಿ ವಾಲ್ಮೀಕಿ ಮಹರ್ಷಿಯ ರಾಮಾಯಣ ಸಂತತ ಹರಿಯುವ ಅಮೃತಮಯ ಗಂಗಾಜಲ. ಅದನ್ನು ಎಷ್ಟೋ ಕವಿಗಳು ತಮ್ಮ ಯೋಗ್ಯತಾನುಸಾರ ಕುಡಿದಿದ್ದಾರೆ. ಇತರರಿಗೆ ಕುಡಿಸಿದ್ದಾರೆ. ನಾನೂ ನನ್ನ ಬೊಗಸೆಯಲ್ಲಿ ತುಂಬಿಕೊಂಡು ಕುಡಿದಿದ್ದೇನೆ, ತೃಪ್ತಿ ಪಟ್ಟಿದ್ದೇನೆ. ಸಂಸ್ಕೃತ ಅರಿಯದ ಮಕ್ಕಳಿಗೆ ಕುಡಿಸುವ ಪ್ರಯತ್ನಪಟ್ಟಿದ್ದೇನೆ. ಮಕ್ಕಳಿಗೆ ತೃಪ್ತಿಯಾದೀತೆಂದು ನಂಬಿದ್ದೇನೆ.

ಇದು ಅನುವಾದವಲ್ಲ, ಸ್ವತಂತ್ರ ಕೃತಿ.

ನನ್ನ "ಶ್ರೀಭಗವದ್ಗೀತೆ"ಯು ಶ್ರೀರಾಮ ಸೇವಾ ಟ್ರಸ್ಟಿನಿಂದ ಪ್ರಕಟವಾದ ಕೆಲವೇ ತಿಂಗಳಲ್ಲಿ ಈ "ಬಾಲರಾಮಾಯಣದ" ನಾಲ್ಕು ಸಂಪುಟಗಳು ಪ್ರಕಟವಾಗುತ್ತಿರುವದು ಒಂದು ಯೋಗಾಯೋಗವೆಂದೇ ಹೇಳಬಹುದು. ಇಷ್ಟು ತೀವ್ರ ಆರ್ಥಿಕ ಅನುಕೂಲತೆಯಾದೀತೆಂದು ಅನಿಸಿರಲಿಲ್ಲ. ಭಗವಂತನ ಕರುಣೆಯಿಂದ ಮಹಾದಾನಿಗಳು ಮುಂದೆ ಬಂದಿದ್ದಾರೆ.

ಬಾಲರಾಮಾಯಣದ ಮೊದಲನೆಯ ಹಾಗೂ ಎರಡನೆಯ ಸಂಪುಟಗಳ ಪ್ರಕಟನೆಗಾಗಿ, ಮಹಾದಾನಿಗಳಾದ ಶ್ರೀ ಮಲ್ಲಪ್ಪ ಸಿಂಧೆಯವರು ತಮ್ಮ ದಿವಂಗತ ತಂದೆ-ತಾಯಿಯವರ ಸ್ಮರಣಾರ್ಥ ಉದಾರ ಧನಸಹಾಯ ಮಾಡಿದರು. ಮೂರನೆಯ ಸಂಪುಟಕ್ಕಾಗಿ ದಿವಂಗತ ಶ್ರೀ ತುಕಾರಾಮ ಕಿಲಕಿಲೆಯವರ ಸ್ಮರಣಾರ್ಥ ಅವರ ಅಣ್ಣಂದಿರಾದ ಶ್ರೀ ಲಕ್ಷ್ಮಯ್ಯ ಕಿಲಕಿಲೆ ಹಾಗೂ ಅವರ ಚಿರಂಜೀವ ಶ್ರೀ ಚಂದ್ರಶೇಖರ ಕಿಲಕಿಲೆ ಇವರು ಉದಾರ ಧನಸಹಾಯ ಮಾಡಿದರು.

ಪ್ರಸ್ತುತ ನಾಲ್ಕನೆಯ ಸಂಪುಟಕ್ಕೆ ರಾಯಚೂರಿನ ಫರೂಕ ಅನ್ವರ ಕಂಪನಿಯ ಮಾಲಿಕರಾದ ಶ್ರೀ ಗಫಾರ ಶೇಠರವರು ಉದಾರ ಧನಸಹಾಯ ಮಾಡಿದುದಕ್ಕಾಗಿ ಈ ನಾಲ್ಕನೆಯ ಸಂಪುಟವು ಇಷ್ಟು ತೀವ್ರ ಬೆಳಕು ಕಾಣಲು ಸಾಧ್ಯವಾಗಿದೆ. ಎಲ್ಲ ಮಹಾದಾನಿಗಳಿಗೂ ಇತರ ದಾನಿಗಳಿಗೂ ಅವರ ಸಹಾಯಕ್ಕಾಗಿ ಅತ್ಯಂತ ಕೃತಜ್ಞನು.

ಸಹ ಧರ್ಮದರ್ಶಿಗಳಾದ ಡಾ. ಎ. ಶಂಕರ ಹಾಗೂ ಶ್ರೀ ಎಸ್. ಜಿ. ಲೋಖಂಡೆ ಇವರ ಉತ್ಸಾಹ ಆದಮ್ಯವಾದುದು. ಅವರಿಬ್ಬರ ಸಹಕಾರ ಹಾಗೂ ಪ್ರಯತ್ನದ ಫಲವಾಗಿಯೇ ಬಾಲರಾಮಾಯಣವು ಇಷ್ಟು ತೀವ್ರ ಬೆಳಕು ಕಂಡಿದೆ. ಒಂದು ವರ್ಷದಲ್ಲಿ ಕೊನೆಯ ಎರಡು ಸಂಪುಟಗಳು ಪ್ರಕಟವಾಗುವ ಸಾಧ್ಯತೆಯೂ ಆಗಿದೆ.

ಸುಂದರವಾಗಿ ಅಲ್ಪಾವಕಾಶದಲ್ಲಿ ಮುದ್ರಿಸಿದ ಶ್ರೀ ಘಾಣೇಕರರಿಗೂ ಕೃತಜ್ಞತೆಗಳು.

ರಾಯಚೂರು
ದಿ. ೧೬–೪–೧೯೭೮
ಶ್ರೀರಾಮ ನವಮಿ

ನಾರಾಯಣರಾವ ತಾಳೀಕೋಟೆ

# ಶ್ರೀ ರಾಮ ಸೇವಾಟ್ರಸ್ಟ್, ರಾಯಚೂರು
# ಧರ್ಮಗ್ರಂಥ ಪ್ರಕಾಶನ ವಿಭಾಗಕ್ಕೆ ಧನಸಹಾಯ ಮಾಡಿದ ಮಹನೀಯರು

೧-೮-೧೯೬೬ ರಿಂದ ೨೦-೩-೬೮ ವರೆಗೆ

| | | |
|---|---|---|
| ೧. | ಶ್ರೀ ಎನ್. ಎಸ್. ಜೋಶಿ, ಮುಂಬಯಿ | ೧೦೧—೦೦ |
| ೨. | ಶ್ರೀ ನಾರಾಯಣರಾವ ಟಿಕಾರೆ ಧಾರವಾಡ | ೨೦೨—೦೦ |
| ೩. | ಇತರರು | ೪೦—೦೦ |

## ನಿವೇದನೆ:

ನಮ್ಮ ಪ್ರಕಾಶನ ವಿಭಾಗದಿಂದ ಹೊರಬಂದ 'ಶ್ರೀಭಗವದ್ಗೀತೆ' ಹಾಗೂ 'ಬಾಲರಾಮಾಣ'ದ ಮೊದಲಿನ ಎರಡು ಸಂಪುಟಗಳಿಂದ ಓದುಗರು ಪರಿಚಿತರಾಗಿದ್ದಾರೆ. ಮುಂದಿನ ಸಂಪುಟಗಳು ಬರುವದಕ್ಕಾಗಿ ತಮ್ಮೆಲ್ಲರ ಆರ್ಥಿಕ ಸಹಾಯಕ್ಕಾಗಿ ಕೋರುವೆವು.

| | | ಬೆಲೆ ರೂ. |
|---|---|---|
| ಶ್ರೀ ಭಗವದ್ಗೀತೆ | .... .... .... | ೬-೦೦ |
| ಬಾಲರಾಮಾಯಣ | ಪ್ರಥಮ ಸಂಪುಟ .... .... (ಬಾಲಕಾಂಡ-ಅಯೋಧ್ಯಾಕಾಂಡ) | ೮-೦೦ |
| ,, | ಎರಡನೆಯ ಸಂಪುಟ .... .... (ಅರಣ್ಯ ಕಾಂಡ, ಕಿಷ್ಕಿಂಧಾ ಕಾಂಡ) | ೮-೦೦ |
| ,, | ಮೂರನೆಯ ಸಂಪುಟ .... .... (ಸುಂದರ ಕಾಂಡ) | ೭-೦೦ |
| ,, | ನಾಲ್ಕನೆಯ ಸಂಪುಟ (ಅಚ್ಚಿನಲ್ಲಿ) (ಯುದ್ಧಕಾಂಡ ಪೂರ್ವಭಾಗ) | ೭-೦೦ |
| ,, | ಐದನೆಯ ಸಂಪುಟ .... .... (ಯುದ್ಧಕಾಂಡ ಉತ್ತರಭಾಗ) | ೮-೦೦ |
| ,, | ಆರನೆಯ ಸಂಪುಟ .... .... (ಉತ್ತರಕಾಂಡ) | ೮-೦೦ |
| | | ೫೨-೦೦ |

ಮುದ್ರಣ ಪೂರ್ವದಲ್ಲಿಯೇ ಚಂದಾದಾರರಾದರೆ ಎಲ್ಲ ಪುಸ್ತಕಗಳನ್ನು ಕೇವಲ ರೂ. ೪೫/- ಕ್ಕೆ ಕೊಡಲಾಗುವದು.

ರೂ. ೧೦೧/- ಕೊಡುವವರು ಮೇಲೆ ಕಾಣಿಸಿದ ಪುಸ್ತಕ ಮಾಲಿಗೆ ದಾನಿಗಳೆಂದು ಪರಿಗಣಿಸಲಾಗುವದು. ರೂ. ೨೫೦೦/- ಕೊಡುವ ಮಹಾ ದಾನಿಗಳ ಇಲ್ಲವೆ ಅವರು ಇಷ್ಟಪಟ್ಟವರ ಭಾವಚಿತ್ರವನ್ನು ಕೃತಜ್ಞತಾ

ಪೂರ್ವಕವಾಗಿ ಒಂದು ಸಂಪುಟದಲ್ಲಿ ಹಾಕಲಾಗುವದು. ಕಾರಣ, ಉದಾರ ದಾನಿಗಳು ಚಂದಾದಾರರಾಗಿ, ದಾನಿಗಳಾಗಿ, ಮಹಾದಾನಿಗಳಾಗಿ ಪ್ರೋತ್ಸಾಹಿಸಬೇಕಾಗಿ ಸವಿನಯ ವಿನಂತಿ.

ಇದಲ್ಲದೆ 'ಬಾಲ ಮಹಾಭಾರತ'ದ ಕೃತಿಯು ಸುಮಾರು ಹದಿನೈದು ಸಾವಿರ ಶ್ಲೋಕಗಳಲ್ಲಿ ಸಿದ್ಧವಾಗಿದೆ. ಬಾಲರಾಮಾಯಣದ ಮುದ್ರಣ ಮುಗಿದ ಕೂಡಲೇ ಅವನ್ನು ಕೈಗೆತ್ತಿಕೊಳ್ಳಲಾಗುವದು. ಅದಕ್ಕೂ ಕೂಡ ಚಂದಾ ವಿವರವನ್ನು, ದಾನಿಗಳ ವಿವರವನ್ನು ಪ್ರಕಟಿಸಲಾಗುವದು. ಅದು ಸುಮಾರು ೧೩ ರಿಂದ ೧೫ ಸಂಪುಟಗಳಲ್ಲಿ ಬರಬಹುದು. ಅದರ ನಿಶ್ಚಿತ ವಿವರಗಳು ಸಿದ್ಧವಾದ ನಂತರ ಪ್ರಕಟಿಸಲಾಗುವದು. ಎಂದಿನಂತೆ ಭಕ್ತರ, ದಾನಿಗಳ ಸಹಕಾರವನ್ನು ಕೋರಲಾಗಿದೆ.

ಈಗಾಗಲೇ ಕೆಲವು ದಾನಿಗಳು ಮುಂದೆ ಬಂದ ಕಾರಣ 'ಶ್ರೀಭಗವದ್ಗೀತೆ' ಮತ್ತು 'ಬಾಲರಾಮಾಯಣ'ದ ನಾಲ್ಕು ಸಂಪುಟಗಳು ಬೆಳಕು ಕಾಣುವಂತಾಗಿದೆ. ಇನ್ನೂ ಹೆಚ್ಚು ಹೆಚ್ಚಾಗಿ ಸಹೃದಯರು ಸಹಾಯ ಮಾಡಿ ನಮ್ಮ ಕಾರ್ಯವನ್ನು ಪ್ರೋತ್ಸಾಹಿಸುವಿರೆಂದು ಆಶಿಸುವೆವು.

**ಡಾ. ಎ. ಶಂಕರ**
**ಶ್ರೀನಿವಾಸರಾವ ಲೋಖಂಡೆ,** ಎಂಜಿನಿಯರ್
**ನಾರಾಯಣರಾವ ತಾಳಿಕೋಟೆ,** ಎಡ್ವೋಕೇಟ
ಧರ್ಮದರ್ಶಿಗಳು

---

## 'ಶ್ರೀರಾಮ ಸೇವಾ ಟ್ರಸ್ಟ್'ದಿಂದ ಪ್ರಕಟವಾದ, ಶ್ರೀ ನಾರಾಯಣರಾವ ತಾಳಿಕೋಟೆ ಇವರು ಬರೆದ 'ಶ್ರೀ ಭಗವದ್ಗೀತೆ'ಯ ಬಗೆಗೆ ಬಂದ ಅಭಿಪ್ರಾಯಗಳು

ಭಗವದ್ಗೀತೆಯ ಹದಿನೆಂಟು ಅಧ್ಯಾಯಗಳ ೭೦೦ ಶ್ಲೋಕಗಳು ಸರಳ ಕನ್ನಡದಲ್ಲಿ ಜನಸಾಮಾನ್ಯರಿಗೂ ತಿಳಿಯುವ ಉದ್ದೇಶದಿಂದ ಈ ಅನು

ವಾದ ಮಾಡಲಾಗಿದೆ. ತಮ್ಮ ಉದ್ದೇಶದಲ್ಲಿ ಅನುವಾದಕರು ಸಫಲರೂ ಆಗಿದ್ದಾರೆ............ ಸಣ್ಣವರೂ ಹಾಡುತ್ತ ಹಾಡುತ್ತ ಅರ್ಥಮಾಡಿಕೊಳ್ಳಬಹುದಾದ ರೀತಿಯಲ್ಲಿ ಲಲಿತವಾಗಿದೆ ಅನುವಾದ.

'ಉದಯವಾಣಿ' ದೈನಿಕ, ಮಂಗಳೂರು
೧೪-೧೧-೧೯೭೬ (ಶ್ರೀರಾಮಾನುಜ ಇವರಿಂದ)

ಸಂಸ್ಕೃತ ಭಾಷೆಯೇ ಬಾರದ ಜನತೆಗೆ ಕೇವಲ ಲಲಿತವಾದ ಹೊಸ-ಗನ್ನಡ ಚೌಪದಿಗಳ ಮೂಲಕ ಮೂಲವನ್ನೆಷ್ಟರ ಮಟ್ಟಿಗೆ ಅಡಕವಾಗಿ ಹೇಳಬಹುದೋ, ಅಷ್ಟರಮಟ್ಟಿಗೆ ಈ ಅನುವಾದಕರು ಹೇಳಹೊರಟು ಗಣನೀಯ ಯಶಸ್ಸನ್ನು ದೊರಕಿಸಿದ್ದಾರೆ. ಒಂದು ಸಾಲಿನಲ್ಲಿ ನಾಲ್ಕು ನಾಲ್ಕು ಮಾತ್ರೆಗಳ ಗಣಗಳಿರುವ ಛಂದಸ್ಸಿನ ಓಟ ಕನ್ನಡ ವಾಚಕರ ಕಿವಿಗೆ ಹಿತವಾಗಿದೆ.

'ಪ್ರಜಾವಾಣಿ' ದೈನಿಕ, ಬೆಂಗಳೂರು
೨೬-೧೨-೧೯೭೬ (ಡಾ. ಕೆ. ಕೃಷ್ಣಮೂರ್ತಿ ಇವರಿಂದ)

Your translation has brought out the spirit of the original. By translating the Geeta into Kannada that too in the form of slokas you have done a great service to the Kannada speaking people.

ಮಾನ್ಯ ಶ್ರೀ ಕೆ. ಎಸ್ ಹೆಗಡೆ
ಸುಪ್ರೀಮ್ ಕೋರ್ಟಿನ ನಿವೃತ್ತ ನ್ಯಾಯಾಧೀಶರು
ಹಾಗೂ ಲೋಕ ಸಭೆಯ ಸ್ಪೀಕರ್.

Your endeavour in this noble task will, I hope, be amply rewarded.

ಮಾನ್ಯ ಶ್ರೀ ಕೆ. ಜಗನ್ನಾಥ ಶೆಟ್ಟಿ
ಕರ್ನಾಟಕ ಹೈಕೋರ್ಟಿನ ನ್ಯಾಯಾಧೀಶರು.

ಗೀತೆಯು ಜ್ಞಾನರೂಪ ಗ್ರಂಥ. ಸುಲಭ ಪದ್ಯಗಳಿಂದ ಜನ ಸಾಮಾನ್ಯರಿಗೆ ತಿಳಿಸುವ ಯತ್ನ ಯೋಗ್ಯವಾಗಿದೆ. ನಿಮ್ಮ ಶ್ರಮ ಸಫಲವಾಗಲೆಂದು ಹಾರೈಸುತ್ತೇನೆ.

ವೀರೇಂದ್ರ ಹೆಗ್ಗಡೆ, ಧರ್ಮಸ್ಥಳ.

ಅನುವಾದವು ಸರಳವಾಗಿಯೂ ಸುಲಲಿತವಾಗಿಯೂ ಆಗಿರುವದಲ್ಲದೆ ಮೂಲದ ಅರ್ಥಕ್ಕಾಗಲಿ, ಭಾವಕ್ಕಾಗಲಿ ಎಲ್ಲಿಯೂ ಚ್ಯುತಿ ಬಂದಿಲ್ಲ. ಸಾಂಗತ್ಯ ಧಾಟಿಯಲ್ಲಿ ಹಾಡಲೂ ಬಹುದು. ಓದುತ್ತ ಹೋದಂತೆ ಅರ್ಥವು ಸ್ಪಷ್ಟವಾಗುತ್ತ ಹೋಗುತ್ತದೆ. ಇದೊಂದು ವೈಶಿಷ್ಟ್ಯಪೂರ್ಣವಾದ ರಚನೆಯೆಂದು ನನ್ನ ಮತ.

ಶ್ರೀ ವೆಂಕಟರಾವ ನಾಯಕ
ನಿವೃತ್ತ ಜಿಲ್ಲಾ ಶಿಕ್ಷಣಾಧಿಕಾರಿಗಳು, ಕಲಬುರ್ಗಿ

ಗೀತೆಯ ಅನುವಾದದಲ್ಲಿ ನಿಮಗೆ ದೊರೆತ ಆನಂದದ ಒಂದಂಶವಾದರೂ ಇನ್ನೊಬ್ಬರಿಗೆ ತಲುಪುವದು.

ಡಾ. ವಿ. ಕೃ. ಗೋಕಾಕ
ಬೆಂಗಳೂರು ವಿಶ್ವವಿದ್ಯಾಲಯದ ನಿವೃತ್ತ ಉಪಕುಲಪತಿಗಳು

ಭಗವದ್ಗೀತೆಯಂತಹ ಅವಿರತ ಜ್ಞಾನಗಂಗೆಯು ನಿಮ್ಮ ಭಗೀರಥ ಪ್ರಯತ್ನದಿಂದ ಕನ್ನಡ ಭಾಷೆಯಲ್ಲಿ ಮೂಡಿ ಹರಿದು ಕನ್ನಡಿಗರೆಲ್ಲರ ಹೃದಯ ಕಮಲಗಳನ್ನು ಮುಟ್ಟುವದೆಂಬ ಪೂರ್ಣಭರವಸೆ ನನಗಿದೆ.

ಪ್ರೊ. ರಮೇಶ ಬಿ. ಜೋಶಿ
ಅಕ್ಕಲಕೋಟ (ಮಹಾರಾಷ್ಟ್ರ)

ಸಾಮಾನ್ಯನಿಗೂ ಗೀತಾಮಾತೆಯನ್ನು ಅರ್ಥಮಾಡಿಕೊಡುವ ಈ ಪುಸ್ತಕದ ಶೈಲಿಯು ಮನಸ್ಸಿಗೆ ನೆಮ್ಮದಿಯನ್ನುಂಟು ಮಾಡಿದೆ.

ಪ್ರೊ. ವಸಂತ ಕುಷ್ಟಗಿ, ಶಹಾಬಾದ

ಪುಸ್ತಕವು ಬಹಿರಂಗ–ಅಂತರಂಗ ಸೌಂದರ್ಯದಿಂದ ಕೂಡಿದೆ. ಎಲ್ಲಕ್ಕೂ ಮಿಗಿಲಾದ ಸಾಧನೆಯೆಂದರೆ ಗಹನ ತಾತ್ವಿಕ ಶ್ಲೋಕಗಳ, ಸುಲಿದ ಬಾಳೆಯ ಹಣ್ಣಿನಂತೆ ಇರುವ ಸರಳ ಕನ್ನಡ ಪದಗಳಲ್ಲಿ 'ಅನುವಾದ'.

ಪ್ರೊ. ಕಮಲನಾಥ ಪಂಕಜ
ಆದವಾನಿ (ಆಂಧ್ರಪ್ರದೇಶ)

ಶ್ರೀ ತಾಳಿಕೋಟೆ ನಾರಾಯಣರಾಯರ ಕುಂದಿಲ್ಲದ ಲೇಖನಿಯಿಂದ ಹೊರಹೊರಟ 'ಶ್ರೀಭಗವದ್ಗೀತೆ' ನಮಗಿರಲು, ಸಂಸ್ಕೃತದ ಹಂಗೇಕೆ? ಭ್ರಾಂತಿಯೇಕೆ?

ಶ್ರೀ ಎನ್. ಎಸ್. ಅವಂತೀಕರ್
ಅಸಿಸ್ಟಂಟ್ ಎಂಜಿನಿಯರ್, ಬೀಳಗಿ

'ಶ್ರೀ ಭಗವದ್ಗೀತೆ'ಯ ಅನುವಾದ ಸರಳ ಹಾಗೂ ಸುಲಭ ಗ್ರಾಹ್ಯ ವಾಗುವ ರೀತಿಯಲ್ಲಿ ಅನುವಾದಿತವಾಗಿದೆ.

ಶ್ರೀ ರಮೇಶ ಪಾಟೀಲ
ಜ್ಯೂನಿಯರ್ ಎಂಜಿನಿಯರ್, ಗೊರೂರು

ಗೂಢವಾದ ಶ್ರೀ ಗೀತಾಮಾತೆಯ ತತ್ವವನ್ನು ಸಮಸ್ತರಿಗೂ ತಿಳಿಯು ವಂತೆ, ಅರ್ಥವಾಗುವಂತೆ ಭಗವಂತನು ನಿಮ್ಮಿಂದ ನುಡಿಯಿಸಿದ್ದಾನೆ.

ಶ್ರೀ ರಾ. ವಿ. ಕುಷ್ಟಗಿ
ನಿವೃತ್ತ ಲೇಖಕ ಶಿಕ್ಷಕರು, ಕಲಬುರ್ಗಿ

ತಿಳಿಗನ್ನಡದಲ್ಲಿ ಸುಲಭ ಶೈಲಿಯಲ್ಲಿ ಬರೆದಿರುವ ಭಗವದ್ಗೀತೆಯು ನನಗೆ ಬಹಳ ಮೆಚ್ಚಿಕೆಯಾಗಿರುವದು.

ಶ್ರೀ ಹನುಮಂತರಾವ ಪಾಟೀಲ, ಢಾಣಕಶಿರೂರು
ನಿವೃತ್ತ ಶಿಕ್ಷಕರು

This new turn in your life is really worthy of your knowledge and intelligence.

ಶ್ರೀ ಎನ್. ಎಸ್. ಜೋಶಿ, ಮುಂಬಯಿ
ಅಂಚೆಖಾತೆಯ ಅಧಿಕಾರಿಗಳು

ಓದುತ್ತ ಓದುತ್ತ ನನಗಾದ ಆನಂದ ಅವರ್ಣನೀಯ.... ತಾಯ್ನುಡಿ ಯಾದ ಕನ್ನಡದಲ್ಲಿ ಓದಿಕೊಳ್ಳುತ್ತಿದ್ದರೆ ಅರ್ಥವು ಸ್ಪಷ್ಟವಾಗಿ ಮನನಕ್ಕೆ ಸುಲಭವಾಗಿರುವದು........ ಅನುವಾದವು ಪದ್ಯರೂಪದಲ್ಲಿರುವದರಿಂದ, ನಿತ್ಯ ಪಾರಾಯಣಕ್ಕೆ ಹಾಡಿಕೊಂಡು ಹೇಳಿಕೊಳ್ಳಲು ಬಹಳ ಪ್ರಶಸ್ತವಾಗಿದೆ ............ ಜನಸಾಮಾನ್ಯರ ದೃಷ್ಟಿಯಿಂದ ತಮ್ಮ ಕೃತಿ ಮಹತ್ವಪೂರಿತ ವಾದುದು.

ಶ್ರೀ ಬಿ. ರಾಮಶೇಷ ಶರ್ಮ, ಸಾಗರ

ತಮ್ಮ ಭಗವದ್ಗೀತೆಯನ್ನು ಓದಿದ್ದೇನೆ. ತುಂಬಾ ಸಂತೋಷ ವನ್ನುಂಟುಮಾಡಿತು. ನೀವು ಪಟ್ಟಿರುವ ಶ್ರಮ ಸಾರ್ಥಕವಾಯಿತು. ಈ ಮುಂದೆ ಸಂಸ್ಕೃತ ಮೂಲ ಗ್ರಂಥಗಳ ಅನುವಾದ ತಮ್ಮಿಂದ ಬರಲೆಂದು ಭಗವಂತನಲ್ಲಿ ಪ್ರಾರ್ಥನೆ.

ಶ್ರೀ ಬಿ. ಎಲ್. ತಿಪ್ಪಾಚಾರಿ, ಚಳ್ಳಕೆರೆ

'ಶ್ರೀ ಭಗವದ್ಗೀತೆ'ಯು ಸರಳ ಕನ್ನಡದಲ್ಲಿ ಮತ್ತು ಸರಳ ಭಾಷೆಯಲ್ಲಿ ಅತ್ಯುತ್ತಮ ಕೃತಿಯಾಗಿದೆ

ಶ್ರೀ ಎಸ್. ಆರ್. ಕುಲಕರ್ಣಿ
ನಿವೃತ್ತ ರೇಲ್ವೆ ಅಧಿಕಾರಿಗಳು, ಮುಂಬಯಿ.

ಸಂಸ್ಕೃತ ತಿಳಿಯದ ಹೆಂಗಳೆಯರ ಅಂಧಃಕಾರವನ್ನು ಕಳೆದು ಬೆಳಗುವ ದಿವ್ಯಜ್ಯೋತಿಯಂತಿದೆ.

ಶ್ರೀಮತಿ ಲಕ್ಷ್ಮೀಬಾಯಿ ಕೋಡಿಹಾಳ
ಸೊಲ್ಲಾಪುರ

## 'ಶ್ರೀರಾಮ ಸೇವಾಟ್ರಸ್ಟ್' ನಿಂದ ಪ್ರಕಟವಾದ ಶ್ರೀ ನಾರಾಯಣರಾವ ತಾಳೀಕೋಟೆ ಇವರು ಬರೆದ 'ಬಾಲರಾಮಾಯಣ' ಮೊದಲನೆಯ ಸಂಪುಟ (ಬಾಲಕಾಂಡ, ಅಯೋಧ್ಯಾಕಾಂಡ) ಇದರ ಬಗೆಗೆ ಬಂದ

## ಅಭಿಪ್ರಾಯಗಳು

'ಸುಲಿದ ಬಾಳೆಯ ಹಣ್ಣಿನಂದದಿ' ಸುಲಲಿತವಾದ ಕನ್ನಡ ಚೌಪದಿಗಳಲ್ಲಿ ಭಗವದ್ಗೀತೆಯನ್ನು ಅಳವಡಿಸಿ ಗಣ್ಯರಾಗಿರುವ ಲೇಖಕರು ಇದೇ ಛಂದೋಗತಿಯಲ್ಲಿ ವಾಲ್ಮೀಕಿ ರಾಮಾಯಣದ ತಿರುಳನ್ನು ಪುನರ್ನಿ-ರೂಪಿಸುವ ರಚನೆ ಈ "ಬಾಲರಾಮಾಯಣ". ಹೆಸರಿಗೆ ತಕ್ಕಂತೆ ಇದು ಮಕ್ಕಳ ಆಸಕ್ತಿಯನ್ನು ಕೆರಳಿಸಿ ಅವರಿಗೆ ರಾಮಾಯಣ ಕಥೆಯನ್ನು ಸರಳವಾಗಿಯೂ ಸರಸವಾಗಿಯೂ ಬಿಂಬಿಸಿ ಹೇಳಲು ಉಪಯುಕ್ತವಾಗಿದೆ. ಹಾಡಲು ಕೂಡಾ ಬರುವಂತಿದೆ.

ಮೂಲ ರಾಮಾಯಣದಲ್ಲಿ ಘಟನೆಗಳ ವೈವಿಧ್ಯವಿರುವಂತೆ ಬಾಹುಲ್ಯವೂ ಇದೆ. ವರ್ಣನೆಗಳ ಸೊಬಗೂ ಇದೆ. ಇದು ಮೂಲದ ಅನುವಾದ

ವಾಗಿರದೆ ಮುಖ್ಯ ಘಟನೆಗಳನ್ನು ಮಾತ್ರ ಸಂಗ್ರಹವಾಗಿ ಹಾಗೂ ಸುಲಭ ವಾಗಿ ಹೇಳುವ ಪದ್ಯಕೃತಿಯಾಗಿದೆ. ಇದರಲ್ಲಿ ಪಾತ್ರಪೋಷಕ ವಿಸ್ತಾರ ಗಳೂ ವರ್ಣನಾಭಾಗಗಳೂ ಸಹಜವಾಗಿಯೇ ಹಿಂದಾಗುತ್ತವೆ. ಆದರೂ ಎಷ್ಟೊಂದು ತಿಳಿಯಾಗಿ ಕಿರಿಯದರಲ್ಲಿ ಹಿರಿಯ ಸಾರ್ಥಕ್ಯವನ್ನು ಲೇಖಕರು ತೋರಿಸಬಲ್ಲರೆಂಬುದಕ್ಕೆ ಯಾವ ಪುಟವನ್ನೇ ತೆಗೆದರೂ ನಿದರ್ಶನಗಳು ದೊರೆಯುತ್ತವೆ.

ಸುಖಾವಹವಾಗಿ ಹರಿಯುವ ಈ ಪದ್ಯಬಂಧದ ಓಘ ಎಳೆಯರ ಮನಸ್ಸನ್ನೆಳೆಯುವಲ್ಲಿ ಸಮರ್ಥವಾಗಿರುವಂತೆ ಕಥಾನಿರೂಪಣೆಯೂ ಸಾರ ವತ್ತಾಗಿದೆ. ಇವರ ಯೋಜನೆ ಬೇಗ ಪೂರ್ಣವಾಗಿ ಮಿಕ್ಕ ಕಾಂಡಗಳೂ ಪ್ರಕಟವಾಗಲೆಂದು ಹಾರೈಸುತ್ತೇವೆ.

'ಪ್ರಜಾವಾಣಿ' ದೈನಿಕ, ಬೆಂಗಳೂರು
೨೪–೭–೭೭ (ಡಾ. ಕೆ. ಕೃಷ್ಣಮೂರ್ತಿ ಇವರಿಂದ)

ಲಲಿತವಾದ ಪದ್ಯಗಳಲ್ಲಿ ಎಳೆಯರಿಗೂ ಅರಿವಾಗುವಂತೆ ಬರೆದ ಈ ಕನ್ನಡ ಬಾಲರಾಮಾಯಣ ಎಳೆಯರಂತೆ ದೊಡ್ಡವರಿಗೂ ವಾಚನೀಯ. ಸುಂದರವಾದ ಮುಖಚಿತ್ರ, ಸುಂದರವಾದ ಮುದ್ರಣ, ಸ್ವಾಗತಾರ್ಹವಾದ ಪ್ರಕಾಶನ.

'ಉದಯವಾಣಿ' ದೈನಿಕ, ಮಂಗಳೂರು
೧೫–೫–೭೦ (ಶ್ರೀ ಬನ್ನಂಜೆ ಇವರಿಂದ)

ಸಂಪೂರ್ಣ ಓದಿದೆ. ಆನಂದವಾಯಿತು. ಹಿಡಿದರೆ ಬಿಡಲಾರದಂಥ ಓಟವಿದೆ ಶೈಲಿಯಲ್ಲಿ, ಭಾಷೆ ಸರಳವಾಗಿದ್ದು ನಿರೂಪಣೆ ಆಕರ್ಷಕವಾಗಿದೆ.

ಶ್ರೀ ವೆಂಕಟರಾವ ನಾಯಕ, ಕಲಬುರ್ಗಿ
ನಿವೃತ್ತ ಜಿಲ್ಲಾಧಿಕಾರಿಗಳು

ನಿಮ್ಮ ಕವಿತಾಶಕ್ತಿಯು ಅಷ್ಟು ಸುಲಭವಾಗಿ ಧಾರಾಳವಾಗಿ ಹರಿಯುತ್ತಿರುವದು ಬಹಳ ಮೆಚ್ಚಬೇಕಾದ ವಿಷಯ. ನೀವು ಶ್ರೀರಾಮ–ಚಂದ್ರನ ಕೃಪೆಗೆ ಪಾತ್ರರಾಗುವದು ಖಂಡಿತ.

ಶ್ರೀ ಕೋಟ ವಾಸುದೇವ ಕಾರಂತ, ಮಂಗಳೂರ
ನಿವೃತ್ತ ಎಂಜಿನಿಯರರು

ನಮ್ಮ ಪುರಾತನ ಕಥೆಗಳು ಅದೃಶ್ಯವಾಗುತ್ತಿರುವ ಈ ಕಾಲದಲ್ಲಿ ಸರಳ ಒಮ್ಮೊಮ್ಮೆ ತೀರ ಸರಳ— ಕನ್ನಡದಲ್ಲಿ ಬರೆದ ರಾಮಾಯಣವನ್ನು ಬಾಲಕರೂ ಉಳಿದವರೂ ಓದಿ ಸಂತೋಷಿಸಲಿ.

ಶ್ರೀ ವಿ. ಕೃ. ಗೋಕಾಕ
ಬೆಂಗಳೂರ ವಿಶ್ವವಿದ್ಯಾಲಯದ ನಿವೃತ್ತ ಉಪಕುಲಪತಿಗಳು

It will be a good source of reading and assimilation of Hindu Culture ... I find it a treasure bank.

ಪ್ರೊ. ರಮೇಶ, ಬಿ. ಜೋಶಿ
ಅಕ್ಕಲಕೋಟ (ಮಹಾರಾಷ್ಟ್ರ)

ಜನಸಾಮಾನ್ಯರಿಗೂ ತಿಳಿಯುವಂತೆ ಬರೆದಿರುವದು ವಿದ್ವತ್ಪೂರ್ಣ ಸಾಹಸದ ಕೆಲಸವಾಗಿದೆ.

ಶ್ರೀ ಹನುಮಂತರಾವ ಪಾಟೀಲ, ಧಾಣಕಶಿರೂರ
ನಿವೃತ್ತ ಶಿಕ್ಷಕರು

You have taken much pains in writing these two big epics in clear and understandable Kannada Language, which would be very useful to young boys.

Neelakantappa Bannadabhavi
Addl. Dist. and Sessions Judge, Gulbarga

## 'ಬಾಲರಾಮಾಯಣದ' ಎರಡನೆಯ ಸಂಪುಟಕ್ಕೆ ಬಂದ ಅಭಿಪ್ರಾಯಗಳು

ಸರಳ ಕನ್ನಡದಲ್ಲಿ ಚುಟುಕ ಕವನಗಳಲ್ಲಿ ಶ್ರೀಮದ್ರಾಮಾಯಣದ ಸಾಹಿತ್ಯವು ರಸವತ್ತಾಗಿ, ಪ್ರಭಾವಿಯಾಗಿ ವ್ಯಕ್ತವಾಗಿದೆ. ತುಂಬ ಚೆನ್ನಾಗಿದೆ. ಮಕ್ಕಳು ಸಹ (ಅವರಿಗೆಂದೇ ಬರೆದುದು ಸಾರ್ಥಕ) ಸುಲಭವಾಗಿ ತಿಳಿದುಕೊಳ್ಳುವಂತಿದೆ.

ಶ್ರೀ ಸು. ನಾ. ಮಲ್ಯ, ಬೆಂಗಳೂರು
'ವಿಕ್ರಮ' ವಾರಪತ್ರಿಕೆಯ ಸಂಪಾದಕರು

ಕನ್ನಡಿಗರೇ ನಿಮಗೆ ಕೃತಜ್ಞರಾಗಿರಬೇಕು. ಇಂಥ ಕಾರ್ಯವನ್ನು ನಡೆಸಿರುವಿರಿ. ಭಗವಂತನು ನಿಮ್ಮನ್ನು ಅನುಗ್ರಹಿಸಲಿ.

ಶ್ರೀ ಎಚ್. ಜಿ. ಜೋಶಿ
ಧಾರವಾಡ ಟ್ರೇನಿಂಗ ಕಾಲೇಜ ನಿವೃತ್ತ ಪ್ರಿನ್ಸಿಪಾಲರು.

Hope your 'Tapasya' of writing Ramayana and Mahabharat — two great epics of Hindu religion in poetry form is seeing success after success.

ಶ್ರೀ ಎ. ಎಸ್. ನಾರಾಯಣರಾವ
ಎಗ್ಸಿಕ್ಯೂಟಿವ್ ಎಂಜಿನಿಯರ್, ಬೀಳಗಿ

ವರ್ಣನೆಗಳು ಮನೋರಂಜಕವಾಗಿವೆ. ಅಲ್ಲಲ್ಲಿ ರೂಪಕಗಳು ಕೃತಿಯಲ್ಲಿ ಜೀವ ತುಂಬಿವಂತಾಗಿದೆ. ಸರಸ್ವತಿ ನಿಮ್ಮ ಲೆಕ್ಕಣಿಕೆಯಲ್ಲಿ ಕುಣಿಯುತ್ತಿದ್ದಾಳೆಂದು ಅನಿಸುತ್ತದೆ. ನಿಮ್ಮ ಉಳಿದ ಸಂಪುಟಗಳು ಬೇಗನೆ ಹೊರಬೀಳಲಿ.

ಶ್ರೀ ವೆಂಕಟರಾವ ನಾಯಕ, ಕಲಬುರ್ಗಿ
ನಿವೃತ್ತ ಜಿಲ್ಲಾಧಿಕಾರಿಗಳು

This book is really cxcellant. It is composed in simple and lucid style that it can be understood by anybody.

ಶ್ರೀ ಎಸ್. ಎಚ್. ಜೋಶಿ ಮುಂಬಯಿ
ಅಂಚೆ ಅಧಿಕಾರಿಗಳು

Glad to learn new poetic implications of your transperant thoughts.

ಪ್ರೊ. ರಮೇಶ ಬಿ. ಜೋಶಿ
ಅಕ್ಕಲಕೋಟ (ಮಹಾರಾಷ್ಟ್ರ)

ಬರೆಯುವ ಶೈಲಿಯು ಸರಳವಾಗಿದ್ದು, ಆಕರ್ಷಕವಾಗಿದ್ದು, ಪಾಮರರಿಗೂ ತಿಳಿಯುವಂತಿದೆ.

ಶ್ರೀ ಶ್ರೀ. ರಾ. ಕುಲಕರ್ಣಿ, ಬಾಗಲಕೋಟೆ

" ಅವು (ಪದ್ಯಗಳು) ಸಂವಾದಾತ್ಮಕವಾಗಿದ್ದು ಕಥೆಯ ಓಟಕ್ಕೆ ಸಹಾಯಕವಾಗಿವೆ. ಮಕ್ಕಳಿಗೊಂದು ಉತ್ತಮ ಕೊಡುಗೆ."

'ವಿಕ್ರಮ' ವಾರ ಪತ್ರಿಕೆ
ತಾಳ್ತಜೆ ರಘುಪತಿ ಇವರಿಂದ
೩-೮-೧೭೭

ಸುಂದರವಾದ ಪದ್ಯರೂಪದಲ್ಲಿ ಪ್ರಕಟವಾಗಿದೆ— ಪದ್ಯ ಲಲಿತವಾಗಿದೆ. ಮಕ್ಕಳೂ ಓದಿ ಅರ್ಥಮಾಡಿಕೊಳ್ಳುವಂತಿದೆ.

'ಉದಯವಾಣಿ' ದೈನಿಕ ಮಂಗಳೂರು
೧೦-೧೦-೭೭ ರಾಮಾನುಜ

## 'ಬಾಲರಾಮಾಯಣ'ದ ೩ನೆಯ ಸಂಪುಟ
(ಸುಂದರಕಾಂಡದ ಬಗ್ಗೆ ಬಂದ)

## ಅಭಿಪ್ರಾಯಗಳು

(೧) ವೀರ ಅದ್ಭುತ ವೃತ್ತಾಂತಗಳಿಂದ ಮನಸೆಳೆಯುವ ಕಥೆ, ಖಚಿತವಾಗಿ ಮನಸ್ಸಿನಲ್ಲಿ ನಿಲ್ಲುವಂತಹ ಪಾತ್ರಗಳು, ಸುಲಲಿತವಾದ ಪದ್ಯಾವಲಿ, ಭಾವಪೂರ್ಣವಾದ ಹಿತಮಿತ ವರ್ಣನೆ ಮತ್ತು ಸುಲಭವಾದ ಛಂದೋಗತಿ, ಈ ಎಲ್ಲ ಗುಣಗಳೂ ಪರಿಪಾಕಗೊಂಡಿರುವ ಈ ಹೊಸ ರಾಮಾಯಣ ಜನಪ್ರಿಯವಾಗುವುದರಲ್ಲಿ ಸಂದೇಹವಿಲ್ಲ.

ಕಥಾನಿರೂಪಣೆಯಲ್ಲಿ, ಓಟ ಕುಗ್ಗದಂತೆ, ಆಕರ್ಷಕ ಪ್ರತಿಭಾಪೂರ್ಣ ವರ್ಣನೆಯ ಸೊಬಗು ಮಾಸದಂತೆ ಪಾತ್ರಗಳ ಸೂಕ್ಷ್ಮ ಭಾವಸ್ಪಂದನ ಸಜೀವವಾಗಿ ಉಳಿಯುವಂತೆ ಲೇಖಕರು ನಾಲ್ಕು ಮಾತ್ರೆಗಳ ಹೊಸ ಚೌಪದಿಯನ್ನು ತಮ್ಮ ಸಮರ್ಥ ಮಾಧ್ಯಮವನ್ನಾಗಿ ಮಾಡಿಕೊಂಡಿದ್ದಾರೆ, ಅದು ಅಡೆತಡೆಯಿಲ್ಲದೆ ಸಾಗುತ್ತದೆ. ಅರ್ಥ ವ್ಯಕ್ತಿಯನ್ನೂ ಅಷ್ಟೇ ತೀವ್ರ

ಗತಿಯಿಂದ ಸಾಧಿಸುತ್ತದೆ. ದೇವ-ರಾಕ್ಷಸರನ್ನು ಕುರಿತು ಪೌರಾಣಿಕ ಪ್ರಪಂಚವನ್ನು ಓದುಗರು ಸುಲಭವಾಗಿ ಪ್ರವೇಶಿಸುವಂತೆ ಈ ಕಥನ-ಕಾವ್ಯ ದಾರಿತೋರುತ್ತದೆ.

'ಪ್ರಜಾವಾಣಿ' ದೈನಿಕ, ಬೆಂಗಳೂರು
೨೯-೧-೭೮ (ಡಾ. ಕೆ. ಕೃಷ್ಣಮೂರ್ತಿ)

(೨) ಬಾಲರಾಮಾಯಣದ ಮೊದಲ ಎರಡು ಭಾಗಗಳಂತೆಯೇ ಸುಂದರಕಾಂಡವನ್ನು ಒಳಗೊಂಡ ಈ ಮೂರನೆಯ ಭಾಗವೂ ಸತ್ವ ಹಾಗೂ ಸೌಂದರ್ಯ ಎರಡನ್ನೂ ಹೊತ್ತು ಪ್ರಕಟವಾಗಿದೆ. ರೋಚಕವಾದ ಲಲಿತವಾದ ಪದ್ಯಗಳಲ್ಲಿ ಹರಿಯುವ ಈ ರಾಮಕಥೆ ಸುಂದರವಾದ ಮುದ್ರಣದಿಂದ ಆಕರ್ಷಕವಾಗಿ ಬಂದಿದೆ.

'ಉದಯವಾಣಿ' ದೈನಿಕ ಮಂಗಳೂರು
೬-೧-೧೯೭೮ (ರಾಮಾನುಜ)

(೩) ಕನ್ನಡ ಬಾಲಭಾಷೆ ನಿಮ್ಮ ರಾಮಾಯಣಕ್ಕೆ, ನಿಮ್ಮ ಕಾವ್ಯಯೋಗಕ್ಕೆ ಧ್ವನಿರಮ್ಯತೆಯನ್ನು ತಂದುಕೊಟ್ಟದೆ. ನಿಮ್ಮ ಈ ಎಲ್ಲ ಕಾವ್ಯಗಳನ್ನು ಬಹು ಬೇಗನೆ ನಾಡಿನಾದ್ಯಂತ ಸಂಗೀತಕ್ಕೆ ಅಳವಡಿಸಿಕೊಂಡು ಹಾಡುವಂತಾಗಲೆಂದು ಅಪೇಕ್ಷಿಸುತ್ತೇನೆ.

ಪ್ರೊ. ವಸಂತ ಕುಷ್ಟಗಿ, ಶಹಾಬಾದ

(೪) ಜನಸಾಮಾನ್ಯರಿಗೆ ವಿಶೇಷವಾಗಿ ಬಾಲ-ಬಾಲಕಿಯರಿಗೆ ತಾವೇ ಓದಿಕೊಂಡು ಹಾಡಲು ಅನುಕೂಲವಾಗುವಂತೆ ಕೃತಿ ರಚನೆ ಆಗಿದೆ.

ಶ್ರೀ ಜಿ. ನಾರಾಯಣ
ಅಧ್ಯಕ್ಷ ಕನ್ನಡ ಸಾಹಿತ್ಯಪರಿಷತ್ತು ಬೆಂಗಳೂರು

(೫) ಸುಂದರಕಾಂಡದಲ್ಲಿ ಭಾವ ಪುಟಿಯುತ್ತಿದೆ. ಓದುವಾಗ ಎಲ್ಲ ರಸಗಳೂ ತುಂಬಿ ಹೊರಚೆಲ್ಲಿ ಓದುಗರನ್ನು ಎಲ್ಲಿಯೋ ಒಯ್ದು ಮುಟ್ಟಿಸುತ್ತವೆ. ಓದುತ್ತ ತಾನೇ ತಾನಾಗುತ್ತಾನೆ.

ಶ್ರೀ ರಾಘವೇಂದ್ರ ಶರ್ಮ (ಕುಷ್ಟಗಿ)
ಕಲಬುರ್ಗಿ

I am greatly impressed by the literary style. His literary style in Balaramayana is to the intellect. The neat Langange with which it is written is a positive proof of his profound experience.

ಶ್ರೀ ಕೆ. ಜಗನ್ನಾಥಶೆಟ್ಟಿ
ಕರ್ನಾಟಕ ಹೈಕೋರ್ಟ ಜಜ್ಜ, ಬೆಂಗಳೂರು

The style and melody continue to be superb as usual and flow like The Ganges on the plain

ಶ್ರೀ ಎನ್. ಎಸ್. ಜೋಶಿ
ನಿವೃತ್ತ ಅಂಚೆಅಧಿಕಾರಿಗಳು, ಮುಂಬಯಿ

(೮) ನಿಮ್ಮ ಬಾಲರಾಮಾಯಣದ ಮೂರೂ ಸಂಪುಟಗಳಲ್ಲಿ ಶಬ್ದಗಳ ಲಾಲಿತ್ಯ, ಓದುಗರ ಚಿತ್ತಕ್ಕೆ ತಂದುಕೊಡುವ ದೃಶ್ಯಗಳ ಔಚಿತ್ಯ, ಕನ್ನಡ ಭಾಷೆಯ ಸುಗಮ ಸಾಹಿತ್ಯ ಎಂಥ ಸಾಹಿತಿಯನ್ನೂ ಕೂಡ ಮುಗ್ಧನನ್ನಾಗಿ ಮಾಡುತ್ತವೆ.

ಶ್ರೀ ನಾರಾಯಣ ಕೋಡಿಹಾಳ, ಸೊಲ್ಲಾಪುರ

ಪ್ರತಿಭಾ ಮುದ್ರಣ, ಧಾರವಾಡ

## ಯುದ್ಧ ಕಾಂಡ

### ಶ್ರೀರಾಮನಿಂದ ಹನುಮಂತನ ಶ್ಲಾಘನೆ

ಅಂಜನಿ ಪುತ್ರನ ಮಾತನು ಕೇಳುತ
ರಾಮನು ಅಂದನು ಸಂತಸದಿಂದಲಿ
ಹನುಮನೆ ನಿನ್ನಯ ಸಾಧನೆ ಇದುವೆ
ಬಲುಬಲು ದೊಡ್ಡದು ಬಹುಬಹು ಕಠಿನವು || ೧ ||

ಬೇರೆಯ ಯಾರೂ ಈ ತೆರ ಮಾಡಲು
ಸಾಧ್ಯವು ಎಂಬುದ ಊಹಿಸಲಾರೆನು
ಸಾಗರ ಲಂಘಿಸಿ ಹೋಗುವರಾರದು
ಗರುಡನ ವಾಯುವ ಬಿಟ್ಟರೆ ನೀನೇ || ೨ ||

ರಾವಣ ರಕ್ಷಿತ ಲಂಕಾನಗರವು
ಯಕ್ಷರು ರಾಕ್ಷಸ ಗಂಧರ್ವೋರಗ
ದೇವರು ದಾನವರೆಲ್ಲರಿಗೂ ಸಹ
ದುರ್ಗಮವಾಗಿಹ ದುರ್ಗವು ನಿಜಕೂ || ೩ ||

ಯಾರೇ ಹೋದರು ಲಂಕೆಯ ಒಳಗಡೆ
ಬಾರರು ಹೊರಗಡೆ ಜೀವದ ಸಹಿತದಿ
ಇಂತಹ ಲಂಕೆಯ ಭಂಗಿಸಿ ಬಂದಿಹ
ಹನುಮನ ಕಾರ್ಯವು ಗಣ್ಯವು ಶ್ಲಾಘ್ಯವು ॥ ೪ ॥

ವಾನರ ರಾಜನ ಸೇವಕನೆನಿಸುತ
ಉತ್ತಮ ಕಾರ್ಯವ ಮಾಡಿದ ಹನುಮನು
ಸೇವಕ ತತ್ವವ ತಿಳಿದಿಹ ಉತ್ತಮ
ಸಂಶಯವಿಲ್ಲವು ಇದರಲಿ ಎನಗೆ ॥ ೫ ॥

ಸ್ವಾಮಿಯ ಕಾರ್ಯವು ದುಷ್ಕರವಿದ್ದರು
ಕಾರ್ಯವ ಸಾಧಿಸಿ ಹೆಚ್ಚಿಗೆ ಇನ್ನೂ
ಒಳ್ಳೆಯ ಕಾರ್ಯವ ಮಾಡಿದನಾದರೆ
ಅವನೇ ಉತ್ತಮ ದೂತನು ನಿಜಕೂ ॥ ೬ ॥

ಸ್ವಾಮಿಯು ಹೇಳಿದ ಕಾರ್ಯವ ಮಾಡುತ
ಬೇರೆಯ ಅನುಗುಣ ಕಾರ್ಯವ ಮಾಡಲು
ಯೋಗ್ಯತೆಯಿದ್ದರು ಮಾಡದೆ ಬಂದರೆ
ಅವನೇ ಮಧ್ಯಮ ವರ್ಗದ ದೂತನು ॥ ೭ ॥

ಸ್ವಾಮಿಯ ಕಾರ್ಯವ ಯಾವನು ಮಾಡಲು
ಅಪ್ಪಣೆ ಹೊಂದಿಯು ಯೋಗ್ಯತೆಯಿದ್ದರು
ಕಾರ್ಯವ ಸಾಧಿಸಲಾಗದೆ ಬರುವನೊ
ಅವನೇ ಅದಮನು ದೂತರ ವರ್ಗದಿ ॥ ೮ ॥

ಹನುಮನು ತನ್ನಯ ಕಾರ್ಯವ ಸಾಧಿಸಿ
ವಾನರ ರಾಜನ ನನ್ನನು ಅನುಜನ
ತುಂಬಿದ ಹರ್ಷದಿ ಉಳಿಸುತ ನಮ್ಮನು
ಹನುಮನೆ ನಿಜಕೂ ಧನ್ಯನು ನೀನು ॥ ೯ ॥

ಇಂತಹ ಸಂತಸತುಂಬಿದ ಸುದ್ದಿಯ
ತಂದರು ಕೂಡಾ ಕೊಡಲಿಕೆ ನಿನಗೆ
ಏನೂ ಇಲ್ಲವು ಎನ್ನಯ ಬಳಿಯಲಿ
ಮಾಡುವದೇನದು ಅಪ್ಪುವೆ ನಿನ್ನನು ॥ ೧೦ ॥

ಎನ್ನುತ ರಾಮನು ಅಪ್ಪಿದ ಹನುಮನ
ಹೃದಯಕೆ ಹೃದಯವ ತಗುಲಿಸಿ ಇಬ್ಬರು
ಮರೆತರು ಒಬ್ಬರನೊಬ್ಬರು ಆಗಲೆ
ನೆಲಸಿವರಿಬರು ತಗುಲಿದ ಹೃದಯದಿ ॥ ೧೧ ॥

## ರಾಮನ ಚಿಂತೆ ಸುಗ್ರೀವನ ಸಲಹೆ

ನಲ್ಮೆಯ ಕ್ಷಣವದು ಕಳೆಯಿತು ಹಾಗೆಯೆ
ನಂತರ ಎಂದನು ರಾಮನು ಅಲ್ಲಿಯೆ
ಸೀತೆಯ ಸುದ್ದಿಯು ತಿಳಿಯಿತು ನಿಜವೇ
ಆದರೆ ಅಲ್ಲಿಗೆ ಹೋಗುವುದೆಂತು ॥ ೧೨ ॥

ಕಪಿಗಳ ಸೈನ್ಯವ ಹೊಂದುತ ನಾವು
ಸಾಗರ ದಾಟುವ ಬಗೆಯದು ಎಂತು
ಎನ್ನುತ ಕುಳಿತನು ಚಿಂತೆಯ ಮಾಡುತ
ಆಗಲೆ ಅಂದನು ಸುಗ್ರೀವ ರಾಜ ॥ ೧೩ ॥

ರಾಮನೆ ಚಿಂತೆಯ ಕಾರಣವೇನಿದೆ
ಸೀತೆಯು ಇರುತಿಹ ತಾಣವು ತಿಳಿಯಿತು
ಶೂರನು ಧೀರನು ಇದ್ದರು ಕೂಡಾ
ಚಿಂತೆಯ ಮಾಡುವೆ ಆಚ್ಚರಿಯಲ್ಲವೆ || ೧೪ ||

ಕಪಿವರರೆಲ್ಲರು ಅತಿಶಯ ಶೂರರು
ಲಂಕೆಗೆ ಲಗ್ಗೆಯ ಹತ್ತುವರೆಲ್ಲರು
ನಿನ್ನಯ ಹುರುಪಿನ ಬೆಂಬಲ ಸಾಕು
ಹೋಗುವ ಲಂಕೆಗೆ ಸೇತುವೆ ಕಟ್ಟುತ || ೧೫ ||

ಸೇತುವೆ ಕಟ್ಟದೆ ಹೋಗಲು ಆಗದು
ತ್ರಿಕೂಟ ಶಿಖರದಿ ಮೆರೆಯುವ ಲಂಕೆಯು
ಮುಟ್ಟದೆವೆಂದರೆ ಸಾಕದು ಎಮಗೆ
ಲಂಕೆಯ ಗೆದ್ದೆವು ಎಂದೇ ತಿಳಿ ನೀ || ೧೬ ||

ಸಾಹಸ ಸಮಯದಿ ಚಿಂತೆಯು ಸಲ್ಲದು
ಕಡಲನು ದಾಟುವ ಯೋಜನೆ ಯೋಚಿಸು
ವಾನರ ವೀರರ ಶಕ್ತಿಯ ನಂಬಿರು
ಜಡತೆಯ ಕಳೆಯುತ ಪುಳಕಿತನಾಗು || ೧೭ ||

ವಾನರ ರಾಜನ ಮಾತನು ಒಪ್ಪುತ
ರಾಮನು ಅಂದನು ಹನುಮನ ನೋಡುತ
ಕಡಲನು ದಾಟಲು ಸಾಧ್ಯವು ಎನಗೂ
ತಪಸಿನ ಶಕ್ತಿಯ ಬಲದಲಿ ಹೋಗುವೆ || ೧೮ ||

ಸೇತುವೆ ಕಟ್ಟುತ ಹೋಗಲುಬಹುದು
ಸಾಗರವನ್ನೇ ಒಣಗಿಸಿ ಹೋಗುವೆ
ದುರ್ಗಮವೆನಿಸಿಹ ಲಂಕಾನಗರಿಯ
ರಕ್ಷಣೆ ರೀತಿಯು ಹೇಗಿದೆ ತಿಳಿಸು || ೧೯ ||

ರಾಕ್ಷಸ ಸೇನೆಯ ರೀತಿಯು ಹೇಗೆ
ಎಷ್ಟಿದೆ ಸೈನ್ಯದ ಶಕ್ತಿಯು ಅಲ್ಲಿಯೆ
ದುರ್ಗದ ದ್ವಾರದ ರೀತಿಯು ಹೇಗೆ
ಅಲ್ಪದಿ ಲಂಕೆಯ ಕಲ್ಪನೆ ಕೊಡು ನೀ || ೨೦ ||

**ಲಂಕೆಯ ರಕ್ಷಣಾವ್ಯವಸ್ಥೆಯ ಬಗ್ಗೆ ಹನುಮಂತನ ವಿವರಣೆ**

ಹನುಮನು ಅಂದನು ರಾಮನೆ ಕೇಳೈ
ಲಂಕೆಯು ತುಂಬಿದೆ ಸಮೃದ್ಧಿಯಿಂದ
ರಕ್ಕಸರೆಲ್ಲರು ರಾವಣಭಕ್ತರು
ರಾವಣ ತೇಜವು ತುಂಬಿದೆ ಎಲ್ಲೆಡೆ || ೨೧ ||

ಚತುರಂಗ ಬಲವು ಅಲ್ಲಿದೆ ಸೈನ್ಯವು
ಯುದ್ಧದ ಸಿದ್ಧತೆಯಲ್ಲಿದೆ ಎಲ್ಲವು
ಲಂಕೆಗೆ ಇರುವವು ನಾಲ್ಕು ದ್ವಾರಗಳು
ಕದಗಳ ಹಿಂದೆಯೆ ಲೋಹದ ಅಗಳಿಯು || ೨೨ ||

ಕೀಲಿತವಾಗಿವೆ ದ್ವಾರಗಳೆಲ್ಲವು
ಬಾಣವ ಬಿಡುತಿಹ ಕಲ್ಲನು ತೂರುವ
ಭೀಕರ ಯಂತ್ರಗಳಿಟ್ಟಿಹರಲ್ಲಿಯೆ
ವೈರಿಯ ಸೈನ್ಯವ ಇವುಗಳೆ ತಡೆವವು || ೨೩ ||

ಅಲ್ಲದೆ ಬಾಗಿಲ ಹತ್ತಿರ ಇರುವವು
ತೀಕ್ಷ್ಣವೇಗದ ಶತಶತ ಶತಘ್ನಿ
ಅದ್ಭುತ ರೂಪದ ಎಕ್ಕಲಿ ನಿರ್ಮಿತ
ಕೋಟೆಯ ಗೋಡೆಯು ಅಭೇದ್ಯ ನಿಜಕೂ || ೨೪ ||

ಚಿನ್ನದ ವಜ್ರದ ಹವಳದ ಚಿತ್ರಣ
ಮುತ್ತುಗಳಿಂದಲಿ ವೈಡೂರ್ಯ ಕೂಡ
ಕೊಚ್ಚಿದ ಚಿತ್ರಣ ಕಾಣುವದೆಲ್ಲೆಡೆ
ಕೋಟೆಯ ಗೋಡೆಯ ನೋಡಲು ನೀವು || ೨೫ ||

ಕೋಟೆಯ ಸುತ್ತಿದೆ ಭೀಕರ ಕಂದಕ
ತುಂಬಿದ ನೀರಲಿ ಮೊಸಳೆಗಳೆಷ್ಟೋ
ಅಲ್ಲದೆ ಜಲವದು ಅತಿಅತಿ ಶೀತಲ
ಕಂಡಕ ದಾಟಲು ಸಂಕ್ರಮವಿರುವವು || ೨೬ ||

ಎತ್ತಲು ಇಳಿಸಲು ಸಂಕ್ರಮಗಳನು
ಅನೇಕ ಯಂತ್ರಗಳಿಟ್ಟಹರಲ್ಲಿಯೆ
ಅಲ್ಲಿಯೆ ಇರುವದು ಕಾವಲು ಪಡೆಯು
ವೈರಿಯ ಸೈನ್ಯವ ಕಂಡರೆ ಆಗಲೆ || ೨೭ ||

ಎತ್ತುತ ಸಂಕ್ರಮವೆಲ್ಲವ ಅವರು
ತಡೆಯುವರಾಗಲೆ ವೈರಿಯ ಮುನ್ನಡೆ
ಉತ್ತರ ದಿಕ್ಕಿನ ಸಂಕ್ರಮವಂತೂ
ವಿಶಾಲ ದೃಢವು ಅಲುಗಿಸಲಸಾಧ್ಯ || ೨೮ ||

ಕಾವಲು ರಕ್ಕಸ ಕೂಡಲು ಅಲ್ಲಿಯೆ
ವೇದಿಕೆ ಇರುವವು ಬದಿಯಲಿ ಚಂದದಿ
ಸೇನೆಯ ಬಲವನು ಈಕ್ಷಿಸುವದರಲಿ
ರಾವಣ ನಿಜಕೂ ಎಚ್ಚರವಹಿಸಿಹ || ೨೯ ||

ತ್ರಿಕೂಟ ಶಿಖರದಿ ಮೆರೆಯುವ ಲಂಕೆಗೆ
ಹೋಗಲು ಮಾರ್ಗವು ಇರುವದೆ ಇಲ್ಲವು
ಜಲದುರ್ಗ ಗಿರಿದುರ್ಗ ವನದುರ್ಗವು
ಕೃತ್ರಿಮ ದುರ್ಗವು ರಕ್ಷಣ ಕೊಡುತಲಿ || ೩೦ ||

ಲಂಕೆಗೆ ಹೋಗಲು ಅಪಾರ ಸಾಗರ
ಹೋಗಲು ನೌಕಾ ಮಾರ್ಗವೂ ಇಲ್ಲ
ಗಜಾಶ್ವ ಸೇನೆಯ ಹೊಂದಿಹ ಲಂಕೆಯು
ಯುದ್ಧದಿ ಯಾರಿಗು ಜಗ್ಗುವದಿಲ್ಲಾ || ೩೧ ||

ಪೂರ್ವದ ದ್ವಾರದಿ ಕಾವಲು ನಿಂತಿಹ
ರಾಕ್ಷಸರಿರುವರು ದಶಸಹಸ್ರದಲಿ
ಖಡ್ಗವ ಶೂಲವ ಧರಿಸುತ ಎಲ್ಲರು
ನೆಚ್ಚಿನ ಭಟರೇ ಇರುವರು ಅವರು || ೩೨ ||

ದಕ್ಷಿಣ ದ್ವಾರವ ಕಾಯುವ ಯೋಧರು
ಶತಸಹಸ್ರದಲಿ ನಿಂದಿಹರಲ್ಲಿಯೆ
ಚತುರಂಗ ಬಲವು ಇರುವುದು ಇಲ್ಲಿಯೆ
ಪಶ್ಚಿಮ ದ್ವಾರದಿ ದಶಲಕ್ಷ ಬಲವು || ೩೩ ||

ಕತ್ತಿಯು ಅಲ್ಲದೆ ಸರ್ವಾಸ್ತ್ರಗಳನು
ಹೊಂದಿಹರೆಲ್ಲರು ಯುದ್ಧದಿ ನಿಪುಣರು
ಉತ್ತರ ದ್ವಾರದ ಸೇನೆಯ ಲೆಕ್ಕವು
ಕೋಟಿಯಲಿರುವದು ಅಗಣಿತ ನಿಜಕೂ ॥ ೩೪ ॥

ರಥಿಕರು ವೀರರು ರಾವಣ ರಾಜನ
ಗೌರವ ಹೊಂದಿಹ ಶೂರರು ಎಲ್ಲರು
ಕಿತ್ತುತ ಒಡೆಯುತ ಸಂಕ್ರಮಗಳನು
ಮುಚ್ಚಿಹೆ ಕಂದಕ ಎಷ್ಟೋ ಮಟ್ಟಗೆ ॥ ೩೫ ॥

ಲಂಕೆಯ ಸುಡುತಲಿ ಕೊಲ್ಲುತ ಸೈನ್ಯವ
ಎಷ್ಟೋ ಕೆಲಸವ ಮಾಡಿಹೆ ನಾನು
ಉಪಾಯದಿಂದಲಿ ಕಡಲನು ದಾಟುತ
ಲಂಕಾನಗರವ ಮುಟ್ಟಿದೆವಾದರೆ ॥ ೩೬ ॥

ಲಂಕೆಯ ನಾಶವು ನಿಶ್ಚಿತ ತಿಳಿಯಿರಿ
ಅಂಗದ ಜಾಂಬವ ದ್ವಿವಿದ ಮೈಂದರು
ಪನಸನು, ನಳನೂ ಅಲ್ಲದೆ ಎಮ್ಮಯ
ಸೇನಾಪತಿಯೂ ನೀಲನು ಇದ್ದರೆ ॥ ೩೭ ॥

ಲಂಕೆಯ ಗೆದೆಯುವ ಚಿಂತೆಯು ಏತಕೆ
ಆಗಸ ಮಾರ್ಗದಿ ಸಾಗುತ ಇವರು
ಲಂಕೆಯ ಕಿತ್ತುತ ತರಲೂ ಬಲ್ಲರು
ಮುಹೂರ್ತ ನೋಡುತ ಏಳಿರಿ ಹೊರಡಲು ॥ ೩೮ ॥

ಸೇನೆಸಹಿತ ಶ್ರೀರಾಮನ ಪ್ರಯಾಣ

ಕೇಳುತ ಹನುಮನ ನುಡಿಯನು ರಾಮನು
ಹನುಮನೆ ಒಪ್ಪಿದೆ ನಿನ್ನಯ ಮಾತಿಗೆ
ಇಂತಹ ಲಂಕೆಯು ಗೆಲ್ಲುವೆ ನಿಜಕೂ
ವಾನರರಾಜನೆ ಈಗಲೆ ಹೊರಡುವ ‖ ೩೯ ‖

ವಿಜಯದ ಸೂಚಕ ಅಭಿಜಿನ್ ಮುಹೂರ್ತ
ಈಗಲೆ ಇರುವದು ಒಳ್ಳೆಯ ಲಕ್ಷಣ
ಸೂರ್ಯನು ಗಗನದ ಮಧ್ಯದಿ ಇರುವನು
ಇರುವದು ಇಂದೇ ಉತ್ತರಾ ತಾರೆ ‖ ೪೦ ‖

ನಾಳೆಗೆ ಬರುವದು ಹಸ್ತಾ ತಾರೆಯು
ಒಳ್ಳೆಯದಲ್ಲವು ಅದುವೇ ಎಮಗೆ
ನಿನ್ನಯ ಕಣ್ಣಗಳು ಮೇಲಕೆ ಅದುರುತ
ಒಳ್ಳೆಯ ಶುಭವನು ಕೋರುತಲಿರುವವು. ‖ ೪೧ ‖

ಇಂದೆಯೆ ಈಗಲೆ ಹೊರಡುವ ಎಲ್ಲರು
ಎನ್ನಲು ಒಪ್ಪಿದ ವಾನರರಾಜನು
ಲಕ್ಷ್ಮಣ ಕೂಡಾ ಒಪ್ಪಿದ ಅದಕೆ
ರಾಮನು ಅಂದನು ಕೂಡಲೆ ಅಲ್ಲಿಯೆ ‖ ೪೨ ‖

ಶ್ರೀರಾಮನ ಆಜ್ಞೆ

ನೀಲನು ಹೊರಡಲಿ ಮುಂದಕೆ ಮೊದಲು
ವೇಗದ ವಾನರ ವೀರರ ಸಂಗಡ
ಲಕ್ಷದ ಮೇಲೆಯೆ ಒಯ್ಯುತ ಸೇನೆಯು
ದಾರಿಯನೆಲ್ಲವ ನಿರ್ಭಯಗೊಳಿಸಲಿ ‖ ೪೩ ‖

ರಕ್ಕಸ ದುರುಳರು ಜಲಫಲ ರಸದಲಿ
ವಿಷವನು ಬೆರೆಸುವ ಸಾಧ್ಯತೆಯುಂಟು
ಹೆಚ್ಚಿನ ಎಚ್ಚರ ವಹಿಸುತ ನೀವು
ಅಡಗಿದ ರಕ್ಕಸರೆಲ್ಲರ ತರಿಯುತ || ೪೪ ||

ಸಾಗಿರಿ ಎಲ್ಲರು ಗಗನದ ಮಾರ್ಗದಿ
ಪರಿಕಿಸಿ ಎಲ್ಲೆಡೆ ವೈರಿಯ ಇರವನು
ಅತಿಅತಿ ಸಣ್ಣದು ಸೈನ್ಯವು ಮಾತ್ರವೆ
ಕಾಯಲಿ ಇಲ್ಲಿಯೆ ಕಿಷ್ಕಿಂದೆಗಾಗಿ || ೪೫ ||

ನೀಲನೆ ಕೇಳೈ ಎಮ್ಮಯ ಕಾರ್ಯವು
ಗುರುತರವಿರುವದು ಸಾಹಸಪೂರ್ಣವು
ವಿಕ್ರಮವೆಲ್ಲವು ಬೇಕಿದೆ ಗೆಲ್ಲಲು
ಎಮ್ಮಯ ಮೆಚ್ಚಿನ ಸೇನೆಯು ಹೊರಡಲಿ || ೪೬ ||

ಹಿಂದೆಯೆ ಹೊರಡಲಿ ಎಮ್ಮಯ ಸೇನೆಯು
ಪರ್ವತ ಪ್ರಾಯರು ಬಹುಬಲ ವೀರರು
ಆಗಿಹ ಗವಾಕ್ಷ ಗಜಗವಯರು ಸಹ
ಅಲ್ಲದೆ ಭೀಕರ ವಾನರ ವೀರರು || ೪೭ ||

ಕಾಯಲಿ ಸೇನೆಯ ಮುಂದಿನ ಭಾಗವ
ವಾನರ ಶ್ರೇಷ್ಠನು ವೃಷಭನು ಮಾತ್ರವೆ
ಕಾಯುತ ಭಾಗವ ಸೇನೆಯ ಬಲದಲ
ವೇಗಶಾಲಿಯೂ ಧೀರನು ಆಗಿಹ || ೪೮ ||

ಗಂಧಮಾದನನು ರಕ್ಷಕನಾಗುತ
ಕಾಯಲಿ ಸೇನೆಯ ಎಡಕಿನ ಭಾಗವ
ಹನುಮನ ಹೆಗಲನು ಏರುತ ನಾನು
ಹುರುಪನು ತುಂಬುತ ವಾನರ ಜನರಲಿ || ೪೯ ||

ಮಧ್ಯದಿ ಇರುವೆನು ನೋಡುತ ಎಲ್ಲರ
ಲಕ್ಷ್ಮಣನೇರಲಿ ಅಂಗದ ಹೆಗಲನು
ಅಲ್ಲದೆ ಸಾಗಲಿ ಎನ್ನಯ ಜೊತೆಗೇ
ಭಲ್ಲೂಕರಾಜ ಜಾಂಬವ ಧೀರನು || ೫೦ ||

ಸುಷೇಣ ಹಾಗೂ ವೇಗದರ್ಶಿಯೂ
ಸೇನೆಯ ಮಧ್ಯದ ರಕ್ಷಣೆ ನೋಡಲಿ
ಹೀಗೆಯೆ ಹೊರಡಲಿ ವಾನರ ರಾಜನು
ಅಪ್ಪಣೆ ಕೊಟ್ಟನು ಕೂಡಲೆ ಅವರಿಗೆ || ೫೧ ||

## ವಾನರ ಸೇನೆಯ ಪ್ರಯಾಣ

ಬಂದರು ವಾನರ ವೀರರು ಎಲ್ಲರು
ತುಂಬಿತು ಗಿರಿವನ ಕಂದರ ಎಲ್ಲವು
ಹೊರಟಿತು ಸೇನೆಯು ದಕ್ಷಿಣ ದಿಕ್ಕಿಗೆ
ಸಂಖ್ಯೆಯು ಬೆಳೆಯಿತು ಕೋಟಿಕೋಟಿಯಲಿ || ೫೨ ||

ಹಾರುತ ನೆಗೆಯುತ ಓಡುತ ಚೀರುತ
ಹೊರಟರು ಮಧುವನು ಕುಡಿಯುತ ಎಲ್ಲರು
ಹಣ್ಣನು ತಿನ್ನುತ ಗಿಡಗಳ ಕೀಳುತ
ತೂರುತ ಒಬ್ಬರನೊಬ್ಬರು ಹೊರಟರು || ೫೩ ||

ಶತಬಲಿಯಿದ್ದನು ಮಾಡುತ ರಕ್ಷಣೆ
ಎಲ್ಲೆಡೆ ಸೇನೆಯ ಭಾರವ ಹೊತ್ತಿಹ
ಸುಷೇಣ ಜಾಂಬವ ಮಧ್ಯದಿ ಇದ್ದರು
ಮುಖ್ಯರು ಎಲ್ಲೆಡೆ ಸುತ್ತುತಲಿದ್ದರು || ೫೪ ||

ಹಗಲೂ ರಾತ್ರಿಯು ಸಾಗುತ ಸೇನೆಯು
ದಾಟುತ ಹಾಗೆಯೆ ಸಹ್ಯ ಗಿರಿಯನು
ಮಲಯ ಪರ್ವತವ ಹಿಂದಕೆ ಹಾಕುತ
ಬಂದರು ಎಲ್ಲರು ಮಹೇಂದ್ರ ಗಿರಿಗೆ || ೫೫ ||

ಶಿಖರವ ಏರುತ ಕಂಡನು ರಾಮನು
ಸಾಗರ ಹರಡಿದ ನೀರನು ದೂರದಿ
ವಾನರರಾಜನೆ ನೋಡೈ ಸೀನೂ
ಬಂದೆವು ನಿಜಕೂ ಸಾಗರ ತೀರಕೆ || ೫೬ ||

ಮೊದಲಿನ ಚಿಂತೆಯೆ ಉದಿಸಿದೆ ಮತ್ತೆ
ಆಚೆಯ ದಂಡೆಯು ಕಾಣದು ಎಲ್ಲಿಯು
ದಾಟುವ ಒಗೆಯನು ಕೂಡುತ ಎಲ್ಲರು
ಚಿಂತನೆ ಮಾಡುವ ಮುಂದಿದ ಕಾರ್ಯವ || ೫೭ ||

ಎಮ್ಮಯ ಸೇನೆಯು ಇಲ್ಲಿಯೆ ಉಳಿಯಲಿ
ಸೈನ್ಯದ ಭಾಗದ ಮುಖ್ಯರು ಎಲ್ಲರು
ತಮ್ಮಯ ಭಾಗದ ರಕ್ಷಣೆ ಮಾಡಲಿ
ಉಳಿದಿಹ ವಾನರವೀರರು ಮಾತ್ರವೆ || ೫೮ ||

ಸುತ್ತುತ ಎಲ್ಲೆಡೆ ತಿಳಿಯಲಿ ಅವರು
ವೈರಿಯ ಬಲೆಯದು ಇದ್ದರೆ ಸುತ್ತಲು
ರಾಮನ ಆಜ್ಞೆಯ ಮೇರೆಗೆ ಕೂಡಲೆ
ಉಳಿಯಿತು ಸೇನೆಯು ಸಾಗರ ತೀರದಿ ॥ ೫೯ ॥

ಭೀಕರ ಸಾಗರ ಭೋರ್ಗರೆಯುತ್ತಲಿ
ಉಕ್ಕುತಲಿದ್ದಿತು ಚಿಮ್ಮುತ ಗಗನಕೆ
ಕಪಿಗಳು ಎಲ್ಲರು ನಿಂತರು ನೋಡುತ
ದಾಟುವ ಬಗೆಯನು ಚಿಂತಿಸುತೆಲ್ಲರು ॥ ೬೦ ॥

**ಸಾಗರ ತೀರದಲ್ಲಿ ಸೇನೆಯ ಬಿಡಾರ**

ಸಾಗರದುತ್ತರ ತೀರದಿ ನೀಲನು
ಕ್ರಮದಲಿ ಬಿಡಾರ ಹೂಡಿಸಿ ಆತನು
ಸಮರದ ನೀತಿಗೆ ಅನುಗುಣವಾಗಿಯೆ
ರಕ್ಷಣೆ ಮಾಡಿದ ವಾನರ ಸೇನೆಯ ॥ ೬೧ ॥

ಮೈಂದ ದ್ವಿವಿದರು ಕಾವಲು ಮಾಡುತ
ತಿರುಗುತಲಿದ್ದರು ಸುತ್ತಲು ನೋಡುತ
ರಾಮನು ನೆನೆಸುತ ಸೀತಾದೇವಿಯ
ಅಂದನು ತಮ್ಮಗೆ ಲಕ್ಷ್ಮಣ ಕೇಳೈ ॥ ೬೨ ॥

ಕಾಲವು ಕಳೆಯಲು ಶೋಕವು ಇಳಿಯುವ
ರೀತಿಯು ಇರುವದು ಲೋಕದಿ ಎಲ್ಲಿಯು
ಎನ್ನಯ ಶೋಕವು ಹೆಚ್ಚುತಲಿರುವದು
ಆಶ್ಚರಿಯಲ್ಲವೆ ದಿನವೂ ದಿನವೂ ॥ ೬೩ ॥

## ಲಂಕೆಯಲ್ಲಿ ರಾವಣನ ಮಂತ್ರಾಲೋಚನೆ

ಇತ್ತಲಿ ಲಂಕಾಪುರದಲಿ ರಾವಣ
ಹನುಮನ ಹಾವಳಿ ಕೇಳುತ ಕಳವಳ
ತುಂಬಿದ ಮನದಲಿ ನಾಚುತ ಅಂದನು
ರಕ್ಕಸವೀರರೆ ವಾನರನೊಬ್ಬನು ॥ ೬೪ ॥

ದುರ್ಗಮು ಲಂಕೆಯ ಒಳಗಡೆ ಬರುತಲಿ
ಸೀತೆಯ ಜೊತೆಗೇ ಮಾತನು ಆಡುತ
ಲಂಕಾಪುರವನು ಸುಡುತಲಿ ಎಲ್ಲವ
ಕೊಂದನು ರಕ್ಕಸವೀರರ ಎಷ್ಟೋ ॥ ೬೫ ॥

ಹಾಗೆಯೆ ಮರಳಿದ ನಿಶ್ಚಿತನಾಗಿ
ಆದುದು ಆಯಿತು ಮಾಡುವದೇನದು
ಮುಂದಿನ ಮಾರ್ಗವು ಯುಕ್ತವು ಯಾವುದು
ಯೋಚಿಸಿ ಮಾಡುವ ಕಾರ್ಯವು ದೃಢವು ॥ ೬೬ ॥

ಶೂರರೆ ಎಲ್ಲರು ಯೋಚನೆ ಮಾಡಿರಿ
ಯೋಚನೆಯಂತೆಯೆ ಯೋಜನೆ ಮಾಡಿರಿ
ಅದುವೇ ದಾರಿಯು ವಿಜಯಕೆ ನಿಶ್ಚಿತ
ರಾಮನ ವಿಷಯವ ಯೋಚಿಸಿ ಎಲ್ಲರು ॥ ೬೭ ॥

ಲೋಕದ ಜನವದು ಮೂರು ಬಗೆಯದು
ಹಿತವಹ ಸಚಿವರು ಗೆಳೆಯರು ಬಂಧುವು
ಇವರಲಿ ಚರ್ಚಿಸಿ ದೈವವ ನಂಬುತ
ಕಾರ್ಯವ ಮಾಡುವ ಪುರುಷನೆ ಉತ್ತಮು ॥ ೬೮ ॥

ಯಾವನು ಯೋಚಿಸಿ ಒಬ್ಬನೇ ತಾನು
ಧರ್ಮದ ನೀತಿಯು ಮನದಲಿ ಚಿಂತಿಸಿ
ಕಾರ್ಯವ ಮಾಡುವ ಅವನೇ ಮಧ್ಯಮ
ಗುಣಗಳ ದೋಷವ ತಿಳಿಯದೆ ಹಾಗೆಯೆ ॥ ೭೯ ॥

ಧರ್ಮದ ಬಗೆಯನು ತಿಳಿಯದೆ ಯಾವನು
ಸೊಕ್ಕಿನ ಮದದಲಿ ಉಪೇಕ್ಷೆ ಮಾಡುತ
ಕೇಳದೆ ಯಾರನು ದೈವವ ನಂಬದೆ
ಕಾರ್ಯವ ಮಾಡುವನವನೇ ಅಧಮನು ॥ ೭೦ ॥

ಅಂತೆಯೆ ಇರುವದು ಮಂತ್ರಾಲೋಚನೆ
ಅದುವೂ ಕೂಡಾ ಮೂರು ಬಗೆಯದು
ಸಚಿವರು ಎಲ್ಲರು ಶಾಸ್ತ್ರದ ಮಾರ್ಗದಿ
ಯೋಚಿಸಿ ಎಲ್ಲರು ಒಪ್ಪಿದರಾದರೆ ॥ ೭೧ ॥

ಅದುವೇ ನಿಜಕೂ ಉತ್ತಮ ಮಂತ್ರವು
ಚರ್ಚೆಯ ಕಾಲದಿ ಒಪ್ಪಿಗೆಯಾಗದೆ
ಕೊನೆಯಲಿ ಎಲ್ಲರು ಒಪ್ಪಿದರಾಗಲೆ
ಕರೆವರು ಅದನೇ ಮಧ್ಯಮ ಮಂತ್ರವು ॥ ೭೩ ॥

ಚರ್ಚೆಯ ಕಾಲದಿ ಕೊನೆಗೂ ಕೂಡಾ
ಒಪ್ಪಿಗೆಯಾಗದೆ ಉಳಿದರೆ ಹಾಗೆಯೆ
ಅದುವೇ ಮಂತ್ರಾಲೋಚನೆ ಅಧಮವು
ಕಾರಣ ಎಲ್ಲರು ಯೋಚಿಸಿ ಹೇಳಿರಿ ॥ ೭೨ ॥

ಮಾಡುವದೇನನು ನಿಶ್ಚಯ ಮಾಡಿರಿ
ನಿಮ್ಮಯ ನಿರ್ಣಯ ಒಪ್ಪಿಗೆ ಎನಗೂ
ರಾಮನು ಬರುವದು ನಿಶ್ಚಯ ಇನ್ನು
ಕಪಿಗಳ ಸೇನೆಯು ಬರುವದು ಜೊತೆಗೇ || ೭೪ ||

ಸಾಗರ ದಾಟುತ ಬರುವದು ನಿಶ್ಚಿತ
ಯುದ್ಧವು ಬರುವದು ತಲೆಬಾಗಿಲಿಗೇ
ಬೇರೆಯ ಮಾರ್ಗವೆ ಇಲ್ಲವು ಈಗಲೆ
ನಗರದ ಸೇನೆಯ ಹಿತವನು ಚಿಂತಿಸಿ || ೭೫ ||

ರಕ್ಕಸ ವೀರರು ಕೈಗಳ ಜೋಡಿಸಿ
ಅಂದರು ರಾವಣ ರಾಜನ ಎದುರಿಗೆ
ಕೆಲವರು ಇರುವರು ಬುದ್ಧಿಹೀನರು
ರಾಜನೀತಿಯಲಿ ಹಸುಳೆಗಳಿರುವರು || ೭೬

ವೈರಿಯ ಬಲವನು ತಮ್ಮಯ ಬಲವನು
ಅರಿಯದೆ ಕೆಲವರು ಹೆದರಿಕೆ ಹುಟ್ಟಿಸಿ
ರಾಜನ ಪುಕ್ಕನ ಮಾಡುವ ರಾಜನ
ಎಮ್ಮಯ ಸೇನೆಯ ಶಕ್ತಿಯ ಬಲ್ಲೆವು || ೭೭ ||

### ರಾಕ್ಷಸರಿಂದ ರಾವಣನು ಸಾಧಿಸಿದ ಕಾರ್ಯಗಳ ಹೊಗಳಿಕೆ

ಎಮ್ಮಯ ಆಯುಧ ಬಲ್ಲೆವು ನಾವು
ಪಾತಾಳದೊಳಗೆ ಹೋಗುತ ನೀನು
ಭೋಗವತೀಪುರ ಯುದ್ಧದಿ ಗೆಲ್ಲುತ
ಪನ್ನಗರೆಲ್ಲರ ಮೆಟ್ಟಿದೆಯಲ್ಲವೆ || ೭೮ ||

ಕೈಲಾಸದಲ್ಲಿ ಕುಬೇರನ ಮೆಟ್ಟಿ
ಪುಷ್ಪಕ ತಂದಿಹೆ ಲಂಕಾನಗರಕೆ
ದಾನವಶ್ರೇಷ್ಠನು ಮಯನೂ ಕೂಡಾ
ಹೆದರುತ ನಿನ್ನಲಿ ಸ್ನೇಹವ ಬೆಳೆಸುತ || ೭೯ ||

ತನ್ನಯ ಮಗಳನು ಕೊಟ್ಟನು ನಿನಗೆ
ನಿನ್ನಯ ತಂಗಿಯು ಕುಂಭೀನಸಿಯ
ಪ್ರಿಯಕರ ದಾನವ ಮಧುವನು ಕೂಡಾ
ಸೊಕ್ಕಿಲಿ ಕಾದುತ ಸೋತನು ನಿನಗೇ || ೮೦ ||

ರಸಾತಳದಲಿಯು ಹೋಗುತ ನೀನು
ವಾಸುಕಿ ತಕ್ಷಕ ನಾಗಗಳಲ್ಲದೆ
ಶಂಖ ಜಟಿಯರನು ಸೋಲಿಸಿ ಬಂದಿಹೆ
ಕಾಲಿಕೇಯರೂ ಅತಿಶಯ ಶೂರರು || ೮೧ ||

ಅಲ್ಲದೆ ಇರುವರು ನಾಶರಹಿತರು
ಕಡಿದರು ಕೂಡಾ ಏಳುತ ಬರುತಿಹ
ವರವನು ಪಡೆದಿಹ ದಾನವ ವೀರರು
ನಿನ್ನಯ ಬಲದಿಂ ಗೆಲ್ಲುತ ಅವರನು || ೮೨ ||

ಕೈಸೆರೆ ಹಿಡಿಯುತ ತಂದಿಹೆ ಇಲ್ಲಿಗೆ
ಅಲ್ಲದೆ ಅವರೇ ಕಲಿಸಿದರಲ್ಲವೆ
ಮಾಯಾವಿದ್ಯೆಯ ಏನೂ ಬಿಡದಲೆ
ದಿಕ್ಪಾಲಕರೂ ಸೋತರು ನಿನಗೆ || ೮೩ ||

ಇಂದ್ರನು ಸೋತನು ವರುಣ ಪುತ್ರರು
ಚತುರಂಗ ಬಲದಿ ಬಂದರು ಸೋತರು
ಕೊಳ್ಳೆಯ ಹೊಡೆದಿಹೆ ಯಮಲೋಕವನೂ
ಅಲ್ಲದೆ ಕೊಂದಿಹೆ ಕ್ಷತ್ರಿಯ ವೀರರ || ೮೪ ||

ಮಾನವರಲ್ಲಿಯು ಅತಿಬಲರೆಲ್ಲರು
ಸತ್ತರು ಕಾದುತ ನಿನ್ನಯ ಎದುರಿಗೆ
ಮಾನವ ರಾಮನು ಏತಕೆ ಸಮನು
ಚಿಂತೆಯ ವಿಚಾರ ಇರುವನೆ ರಾಮನು || ೮೫ ||

**ಇಂದ್ರಜಿತುವಿನ ಶೌರ್ಯದ ಹೊಗಳಿಕೆ**

ತಮ್ಮಯ ಕುವರನು ಇಂದ್ರಜಿತುವನು
ಮಾನವ ರಾಮನ ವಾನರರೆಲ್ಲರ
ಕೊಲ್ಲಲು ಸಾಕದು ಹೆಚ್ಚಿಗೆ ಏತಕೆ
ಮಹಾಯಾಗವನು ಮಾಡುತ ಆತನು || ೮೬ ||

ಈಶ್ವರನಿಂದಲೆ ಪಡೆದಿಹ ವರವನು
ಇಂದ್ರನ ಸಂಗಡ ಯುದ್ಧವ ಮಾಡುತ
ಗೆಲ್ಲುತ ಅವನನು ಕೈಸೆರೆ ಹಿಡಿಯುತ
ತಂದನು ಅಲ್ಲದೆ ದರದರ ಎಳೆಯುತ || ೮೭ ||

ರುದ್ರರಾದಿತ್ಯರಲ್ಲದೆ ವಸುಗಳು
ಮರುತ್ತು ಕೂಡಿದ ಭೀಕರ ಸೇನೆಯ
ಸೋಲಿಸಿ ತಂದನು ಇಂದ್ರಜಿತುಕುವರ
ಬ್ರಹ್ಮನ ಮಾತಿಗೆ ಮನ್ನಣೆ ಕೊಡುತಲಿ || ೮೮ ||

ಇಂದ್ರನ ಬಿಡುಗಡೆ ಮಾಡಿದೆಯಲ್ಲವೆ
ಶಂಬರ ವೃತ್ರರ ಕೊಂದಿಹ ಇಂದ್ರನ
ಈ ಪರಿ ಭಂಗಿಸಿ ಕಳಿಸಿಡಿಯಲ್ಲವೆ
ಕಾರಣ ರಾಮನ ಚಿಂತೆಯು ಚಿಂತೆಯೆ || ೮೯ ||

ರಾವಣನಾಗಲೆ ಮುಖವನು ತಿರುಗಿಸಿ
ನೋಡಿದ ರಕ್ಕಸ ನಾಯಕರೆಲ್ಲರ
ಪ್ರಹಸ್ತನೆಂದನು ಕೇಳೈ ರಾಜನೆ
ಎಮ್ಮನು ಯಾರೂ ಕೆಣಕರು ಎನ್ನುವ || ೯೦ ||

ನಂಬಿಕೆಯಿಂದಲಿ ಎಚ್ಚರವಹಿಸದೆ
ಇದ್ದುದೆ ಕಾರಣ ಕೋತಿಯು ಹಗರಣ
ಮೋಸವ ಮಾಡುತ ಕೋಡಗ ಓಡಿದ
ಅಪ್ಪಣೆ ಕೊಡು ನೀ ಈಗಲೆ ಹೋಗುವೆ || ೯೧ ||

ಸಾಗರವರೆಗೂ ಜಗದಲಿ ಎಲ್ಲೆಡೆ
ಕೊಲ್ಲುವೆ ಕಪಿಕುಲ ಬಿಡದಲೆ ಒಂದನು
ಲಂಕೆಯ ರಕ್ಷಣೆ ಮಾಡುವೆ ನಾನು
ಎಂದೂ ಯಾವದು ಕ್ಲೇಶವು ಬಾರದು || ೯೨ ||

ದುರ್ಮುಖನೆಂದನು ಕೋತಿಯ ಚೇಷ್ಟೆಯ
ಸಹಿಸೆನು ಎಂದೂ ಅಲ್ಲದೆ ಹೊಕ್ಕದೆ
ಅರಮನೆಯನ್ನೂ ಹೋಗುವೆ ಈಗಲೆ
ಕೊಲ್ಲುವೆ ಕಪಿಗಳ ಎಲ್ಲರ ನಾನೂ || ೯೩ ||

## ವಜ್ರದಂಷ್ಟ್ರನ ಸಲಹೆ

ವಜ್ರದಂಷ್ಟ್ರನೂ ಗುಡುಗಿದ ಹಾಗೆಯೆ
ರಾಮನ ಲಕ್ಷ್ಮಣ ಸುಗ್ರೀವರನ್ನು
ಕೊಲ್ಲಲು ನಾನೇ ಒಬ್ಬನು ಸಾಕು
ಪರಿಘದಿ ಕೊಲ್ಲುವೆ ಎಲ್ಲರ ಒಬ್ಬನೆ ‖ ೯೪ ‖

ಆದರು ಹೇಳುವೆ ಉಪಾಯ ಒಂದನು
ಆರಿಸಿ ಕಳಿಸಿರಿ ಸಾವಿರ ವೀರರ
ಶೂರರು ವೀರರು ಮಾಯಾ ರೂಪರು
ಮಾನವ ರೂಪವ ತಾಳುತ ಹೋಗಲಿ ‖ ೯೫ ‖

ರಾಮನ ಬಳಿಯಲಿ ಹೋಗುತ ಎಲ್ಲರು
ಹೇಳಲಿ ಭರತನು ಕಳಿಸಿಹನೆಂದು
ಅಲ್ಲದೆ ಹೇಳಿಹ ಆಯೋಧ್ಯೆಗೆ ಬರಲು
ಭೀಕರ ಘಟನೆಯು ಆಗಿದೆಯೆಂದು ‖ ೯೬ ‖

ಅಂದರೆ ರಾಮನು ಹೋಗುವ ಆಗಲೆ
ಉಳಿದಿಹ ಕಪಿಗಳ ಕೊಲ್ಲಲಿ ಎಲ್ಲರು
ಆಗಲೆ ಎದ್ದನು ಕುಂಭಕರ್ಣಸುತ
ನಿಕುಂಭ ರಕ್ಕಸ ಕ್ರೋಧದಿ ಹೇಳಿದ ‖ ೯೭ ‖

ಒಬ್ಬನೆ ಹೋಗುತ ಕೊಲ್ಲುವೆ ಎಲ್ಲರ
ಉಳಿದವರೆಲ್ಲರು ಇಲ್ಲಿಯೆ ಉಳಿಯಿರಿ
ವಜ್ರಹನುಮನು ಹಾಗೆಯೆ ಅಂದನು
ಆಗಲೆ ಎದ್ದರು ರಕ್ಕಸರೆಲ್ಲರು ‖ ೯೮ ‖

ಖಡ್ಗವ ಝಳಪಿಸಿ ಗರ್ಜನೆ ಮಾಡುತ
ನಿಂತರು ಎಲ್ಲರು ಅಪ್ಪಣೆ ಕಾಯುತ
ಆಗಲೆ ಕೇಳಿತು ವಿವೇಕವಾಣಿಯು
ಮಾತದು ಬಂದಿತು ವಿಭೀಷಣನಿಂದ || ೯೯ ||

### ವಿಭೀಷಣನ ವಿವೇಕವಾಣಿ

ಅಣ್ಣನೆ ತಿಳಿಯಿರಿ ನೀತಿಯ ನೀವು
ಸಾಮದಾನಗಳು ಭೇದವು ಮೂರು
ರೀತಿಗಳಿರುವವು ಕಾರ್ಯವ ಮಾಡಲು
ಕಾರ್ಯವು ಆಗದೆ ಹೋದರೆ ದಂಡವು || ೧೦೦ ||

ದಂಡವು ಕೂಡಾ ಯಾರಲಿ ಯುಕ್ತವು
ವಿಷಯ ಸುಖದಲಿ ಮುಳುಗಿದ ಜನರಿಗೆ
ವೈರಿಯ ಕಡೆಯಿಂ ಮುತ್ತಿಹರಾದರೆ
ದೈವದ ಬಲದಲಿ ಹೀನರು ಇದ್ದರೆ || ೧೦೧ ||

ರಾಮನ ವಿಷಯದಿ ನೋಡಿದೆವಾದರೆ
ಕಾಮದ ಸೋಂಕಿಗೆ ದಾಸನು ಇಲ್ಲಾ
ಯುದ್ಧದ ಸಿದ್ಧತೆಯಿಂದಲೆ ಬಂದಿಹ
ಅಲ್ಲದೆ ಪ್ರಬಲನು ಎಂಬುದು ಬಲ್ಲರಿ. || ೧೦೨ ||

ಹನುಮನು ಒಬ್ಬನೆ ಸಾಗರ ದಾಟುತ
ಲಂಕೆಯ ಸೇರುತ ಹಾವಳಿ ಮಾಡಿದ
ಆದುದು ಎಲ್ಲವು ಊಹೆಗೆ ಮೀರಿದೆ
ಕಪಿಗಳ ಶಕ್ತಿಯ ಕಲ್ಪನೆ ಮಾಡೆವು || ೧೦೩ ||

ಅಲ್ಲದೆ ರಕ್ಕಸ ವೀರರೆ ಕೇಳಿರಿ
ರಾವಣ ಅಣ್ಣಾಗೆ ರಾಮನು ಮಾತ್ರವೆ
ಮಾಡಿದುದಾದರು ಏನದು ಹೇಳಿರಿ
ಖರನೇ ಸೊಕ್ಕಿಲೆ ಕೊಲ್ಲಲು ಹೋದನು ॥ ೧೦೪ ॥

ಯುದ್ಧದಿ ರಾಮನು ಕೊಂದನು ಅವನನು
ಯಾರೇ ಆಗಲಿ ತನ್ನಯ ಪ್ರಾಣವ
ರಕ್ಷಿಸಲೋಸುಗ ಯುದ್ಧವ ಮಾಡಲು
ಹಾಗೆಯೆ ಕೊಲ್ಲಲು ಸರಿಯೇ ಇರುವದು ॥ ೧೦೫ ॥

ಪರಸ್ತ್ರೀಹರಣ ಅಲ್ಲದ ಗಮನವು
ಕೀರ್ತಿಯ ಕಳೆಯುವ ಮಾರ್ಗವು ಅಲ್ಲದೆ
ಆಯುವು ಕ್ಷೀಣಿಸಿ ಭಾಗ್ಯವು ಅಳಿಸುತ
ಘೋರದ ಪಾಪದ ರೂಪವು ನಿಜಕೂ ॥ ೧೦೬ ॥

ತರುವದು ಇದುವೇ ಆಪದ ಭೀಕರ
ತಂದಿಹ ಜಾನಕಿದೇವಿಯ ಈಗಲೆ
ಕಳಿಸುತ ಅವಳನು ಕುಲವನು ಉಳಿಸಿರಿ
ರಾಮನ ಜೊತೆಯಲಿ ವೈರವು ಸಲ್ಲದು ॥ ೧೦೭ ॥

ಇಲ್ಲದೆ ಹೋದರೆ ಲಂಕೆಯ ನಾಶವ
ತಪ್ಪಿಸಲಾರಿರಿ ಯಾರೂ ನೀವು
ರಕ್ಕಸ ಕುಲವೇ ಅಳಿಯುವ ಸಮಯವು
ಬಂದಿದೆ ಯೋಚಿಸಿರೆಲ್ಲರು ನೀವು ॥ ೧೦೮ ॥

ಅಣ್ಣನೆ ಎನ್ನಯ ಮಾತನು ಕೇಳಿರಿ
ಸಿಟ್ಟಿನ ಕೈಯಲಿ ಬುದ್ಧಿಯ ಕೊಡದಿರಿ
ಸಿಟ್ಟಲಿ ಧರ್ಮವು ಸೌಖ್ಯವು ಕೀರ್ತಿಯು
ನಾಶವ ಹೊಂದುವ ಸಮಯವು ಬಂದಿದೆ ॥ ೧೦೯ ॥

ರಕ್ಕಸ ಕುಲವನು ಉಳಿಸುವ ಭಾಗ್ಯವು
ಲಂಕೆಯ ಉಳಿಸುವ ಎಮ್ಮನು ಉಳಿಸುವ
ಭಾಗ್ಯವು ಎಲ್ಲವು ನಿನ್ನಯ ಕೈಲಿದೆ
ಒಪ್ಪಿಸು ರಾಮಗೆ ಸೀತೆಯ ಈಗಲೆ ॥ ೧೧೦ ॥

ಕೇಳುತ ಈ ಪರಿ ನುಡಿಯನು ರಾವಣ
ಎದ್ದನು ಒಮ್ಮೆಲೆ ಸಭೆಯನು ಮುಗಿಸುತ
ಹೋದನು ತನ್ನಯ ಅರಮನೆಯೊಳಗಡೆ
ಅಲ್ಲಿಗೆ ಮುಗಿಯಿತು ಅಂದಿನ ಯೋಚನೆ ॥ ೧೧೧ ॥

ವಿಭೀಷಣ ಮಾತ್ರ ಯೋಚಿಸಿ ಯೋಚಿಸಿ
ಮಾರನೆ ದಿನವೇ ಬೆಳಗಿನ ಸಮಯದಿ
ಹೋದನು ರಾವಣ ರಾಜನ ಭವನಕೆ
ರಾವಣ ಕುಳಿತಿಹ ಸುವರ್ಣ ಪೀಠದಿ ॥ ೧೧೨ ॥

ಹೋಗುತ ನಮಿಸಿದ ವಿಭೀಷಣನಾಗ
ಜಯಜಯರಾಜನೆ ಶುಭವದು ಆಗಲಿ
ಎನ್ನಲು ರಾವಣ ತೋರಿದ ಪೀಠವ
ಕುಳಿತನು ತಮ್ಮನು ಸುವರ್ಣ ಪೀಠದಿ ॥ ೧೧೩ ॥

ಕೇವಲ ನೆಚ್ಚಿನ ಸಚಿವರು ಅಲ್ಲದೆ
ಯಾರೂ ಇಲ್ಲದ ಸಮಯವು ಅದುವೇ
ಆಗಲೆ ಅಂದನು ವಿಭೀಷಣ ಮತ್ತೆ
ನಿನ್ನೆಯ ಮಾತನೆ ಹೇಳಲು ಬಂದಿಹೆ ‖ ೧೧೪ ‖

**ಲಂಕೆಯಲ್ಲಿ ಅಪಶಕುನಗಳು**

ಜಾನಕಿ ಬಂದಿಹ ದಿನದಿಂದಲಿಯೇ
ಅಪಶಕುನಗಳೇ ಆಗುತ ಬಂದಿವೆ
ಅಗ್ನಿಗೆ ಹವಿಸನು ಕೊಟ್ಟರೆ ಆಗಲೆ
ಜ್ವಾಲೆಯ ಬದಲಿಗೆ ಹೊಗೆಯೇ ಬರುತಿದೆ ‖ ೧೧೫ ‖

ಅಡಿಗೆಯ ಮನೆಯಲಿ ವೇದಾಧ್ಯಯನದ
ಸ್ಥಳದಲಿ ಕಂಡಿದೆ ಸರ್ಪದ ಬಳಗವು
ಹವಿಸನು ತಿನ್ನಲು ಮುತ್ತಿವೆ ಇರುವೆ
ಹಸುಗಳ ಹಾಲೂ ಬತ್ತಿದೆ ಯಾಕೋ ‖ ೧೧೬ ‖

ಕತ್ತೆ ಒಂಟೆಗಳು ಹೇಸರಗತ್ತೆಯು
ಕೂದಲು ನಿಮಿರಿಸಿ ಕಂಬನಿ ಸುರಿಸುತ
ಇರುವದು ನೋಡಲು ಆಗದು ಯಾರಿಗು
ಕಾಗೆಯ ಹಿಂಡೂ ಕೂಗುತ ಕರ್ಕಶ ‖ ೧೧೭ ‖

ತಿರುಗುತಲಿರುವವು ಲಂಕೆಯ ಮೇಲೆಯೆ
ಹದ್ದುಗಳಾಗಲೆ ಸುತ್ತುತಲಿರುವವು
ಮಂಡಲದಲ್ಲಿಯೆ ನಗರದ ಮೇಲೆ
ಬೆಳಗಿನ ಸಂಜೆಯ ಸಮಯದಿ ಕೇಳಿರಿ ‖ ೧೧೮ ‖

ನರಿಗಳ ಕೂಗನು ವಿಕಾರ ದನಿಯಲಿ
ಹಿಂಸೆಯ ಪಶುಗಳು ನಗರದ ದ್ವಾರದಿ
ಗರ್ಜನೆ ಮಾಡುವದೆಲ್ಲವ ಕೇಳಿರಿ
ಇಂತಹ ಸಮಯದಿ ಒಂದೇ ಮಾರ್ಗವು || ೧೧೯ ||

ಇರುವದು ಅದುವೇ ಶಾಂತಿಯ ಕರ್ಮವು
ಸಚಿವರು ಇತರರು ನಿನ್ನಲಿ ಹೇಳಲು
ಹೆದರಿಕೆ ಕಾರಣ ಉಸುರಲು ಆರರು
ಹೇಳುವೆ ನಿನ್ನಯ ಹಿತಕೇ ನಾನು || ೧೨೦ ||

ಇದ್ದುದು ಸತ್ಯವ ತಿಳಿಸುತಲಿರುವೆನು
ಯೋಚಿಸಿ ಕಾರ್ಯವ ಮಾಡಿರಿ ನೀವು
ಪಥ್ಯವು ತಥ್ಯವು ಇದ್ದರು ಕೂಡಾ
ರಾವಣ ಉರಿದನು ಮಾತನು ಕೇಳುತ || ೧೨೧ ||

## ರಾವಣನ ಉತ್ತರ

ಜಗದಲಿ ಹೆದರಿಕೆ ಯಾರದು ಇಲ್ಲಾ
ಸೀತೆಯು ರಾಮುಗೆ ದಕ್ಕಳು ಎಂದಿಗು
ಇಂದ್ರನ ಪಡೆಯನು ತಂದರು ಕೂಡಾ
ರಾಮನು ನಿಲ್ಲನು ಎನ್ನಯ ಎದುರಲಿ || ೧೨೨ ||

ಎನ್ನಯ ಸೋಲಿನ ಚಿಂತೆಯ ಬಿಡು ನೀ
ರಕ್ಕಸ ಕುಲಕೂ ತೊಂದರೆಯಿಲ್ಲಾ
ಹೆದರಿಕೆ ಬೆದರಿಕೆ ಅಂಜಿಕೆಯಿಲ್ಲಾ
ಭವನಕೆ ತೆರಳುತ ನಿದ್ರೆಯ ಮಾಡೆಲೊ || ೧೨೩ ||

ಎನ್ನುತ ಕಳಿಸಿದ ತಮ್ಮನ ರಾವಣ
ಆದರು ಮನದಲಿ ಉಳಿಯಿತು ಚಿಂತೆಯು
ಆಪ್ತನ ಬೆಂಬಲ ಸಿಗದೇ ಹೋಯಿತು
ಯುದ್ಧದ ಕಾಲವು ಬಂದಿದೆ ಸನಿಹಕೆ || ೧೨೪ ||

ಮಂತ್ರಾಲೋಚನೆ ಮಾಡಲೆಬೇಕು
ರಕ್ಕಸವೀರರ ಒಪ್ಪಿಸಬೇಕು
ಸಭೆಯನು ಕರೆಯಲು ನಿಶ್ಚಯ ಮಾಡುತ
ರಾವಣ ಹೊರಟನು ನಿಜರಾಜಸಭೆಗೆ || ೧೨೫ ||

**ರಾವಣನ ಮಂತ್ರಾಲೋಚನೆ**

ಕರೆಸಿದ ಸಚಿವರ ರಕ್ಕಸವೀರರ
ಆಪ್ತರ ಹಿರಿಯರ ಸೇನಾಪತಿಗಳ
ಕೂಡಿತು ಸಭೆಯದು ವೈಭವದಿಂದಲಿ
ರಾವಣನೆಂದನು ಪ್ರಹಸ್ತನಿಗಾಗ || ೧೨೬ ||

ಸೇನಾಪತಿಯೇ ಚತುರಂಗಬಲದ
ದಕ್ಷರು ಆಗಿಹ ರಾಕ್ಷಸ ಪಡೆಯನು
ನಿಯಮಿಸು ಲಂಕೆಯ ರಕ್ಷಣೆಗಾಗಿಯೆ
ಕೂಡಲೆ ಸಿದ್ಧತೆ ಮಾಡುವೆನೆಂದನು || ೧೨೭ ||

ಬಂದಿಹ ಮಿತ್ರರೆ ಕೇಳಿರಿ ಎಲ್ಲರು
ಧರ್ಮಾರ್ಥಕಾಮ ಇವುಗಳ ವಿಷಯದಿ
ಕ್ಲಿಷ್ಟದ ಸಮಯದಿ ಯೋಚನೆ ಮಾಡುತ
ನಿರ್ಣಯವೀಯಲು ಶಕ್ತರು ಇರುವಿರಿ || ೧೨೮ ||

ಇಂದಿನ ವರೆಗೂ ನಿಮ್ಮಯ ನಿರ್ಣಯ
ನಿಷ್ಫಲವಾದುದೆ ಇಲ್ಲವು ನಿಜಕೂ
ಅಂತೆಯೆ ಇರುವೆನು ಚಿಂತೆಯು ಇಲ್ಲದೆ
ಹಿಂದಿನ ಸಲವೇ ಇಂಗಿತ ಹೇಳಲು || ೧೨೯ ||

ಯತ್ನವ ಮಾಡಿದೆ ಆದರೆ ಆಗಲೆ
ನಿದ್ರೆಯು ತಮ್ಮನು ಎದ್ದಿರಲಿಲ್ಲಾ
ಈಗಲೆ ಏಳುತ ಬಂದಿಹ ಸಭೆಯಲಿ
ರಾಮನು ಎಂಬುವ ಮಾನವನೊಬ್ಬನು || ೧೩೦ ||

ಹೆಂಡತಿ ಸುಂದರ ಸೀತೆಯ ಸಹಿತದಿ
ಕಾಡಲಿ ಇರುತಿಹ ಸಮಯದಿ ನಾನು
ತಂದೆನು ಅವಳನು ಒಬ್ಬಳೆ ಲಂಕೆಗೆ
ಒಪ್ಪದೆ ಎನ್ನನು ಕೇಳಿದಳಾಗಲೆ || ೧೩೧ ||

ವರ್ಷದ ಅವಧಿಯ ಯೋಚನೆ ಮಾಡಲು
ಕೊಟ್ಟಿಹೆನವಳಿಗೆ ಮುಗಿಯುತ ಬಂದಿದೆ
ಸೀತೆಯು ಇಲ್ಲದೆ ಬದುಕೆನು ಎಂದೂ
ಅವಳೇ ಕಾರಣ ಯುದ್ಧಕೆ ಇಂದು || ೧೩೨ ||

ಮಾನವರಾರೂ ಗೆಲ್ಲರು ಎನ್ನನು
ಹಿಂದೆಯೆ ಗೆದ್ದಿಹೆ ದೇವರ ಎಲ್ಲರ
ನೀವೇ ಎನ್ನನು ಗೆದಿಸಿದಿರಾಗಲೆ
ಇಂದೂ ನಿಮ್ಮಯ ಬಲವಿದೆ ಎನಗೆ || ೧೩೩ ||

ಸೀತೆಯ ಶಾಣವ ತಿಳಿಯುತ ರಾಮನು
ಬರುತಿಹ ಇಲ್ಲಿಗೆ ತಮ್ಮನ ಸಹಿತದಿ
ಇರುವರು ಎಲ್ಲರು ಸಾಗರದಾಚೆಗೆ
ಯೋಚನೆ ಮಾಡಿರಿ ರಾಮನ ಕೊಲ್ಲಲು ॥ ೧೩೪ ॥

ಬಂದಿಹ ರಾಮನು ಕಪಿಗಳ ಸಂಗಡ
ಸಾಗರ ದಾಟಲು ಆಗದು ಅವರಿಗೆ
ಆದರು ಅವರನು ಕೊಲ್ಲುವ ರೀತಿಯ
ಯೋಚಿಸಿ ಹೇಳಿರಿ ಬೇಗನೆ ನೀವು ॥ ೧೩೫ ॥

ಕೇಳುತ ಈ ನುಡಿ ಕುಂಭಕರ್ಣನಿಗೆ
ಬಂದಿತು ಕ್ರೋಧವು ಅಂದನು ಆಗಲೆ
ಅಣ್ಣನೆ ನೀನೇ ಒಬ್ಬನೆ ಯೋಚಿಸಿ
ತಂದಿಹೆ ಸೀತೆಯ ಯಾರನು ಕೇಳದೆ ॥ ೧೩೬ ॥

ಮೊದಲೇ ಯೋಚನೆ ಮಾಡಿದುದಾದರೆ
ಕೇಳುತ ಎಮ್ಮನು ಒಳ್ಳೆಯದಿದ್ದಿತು
ಕಾರ್ಯವು ನಿಜಕೂ ಅನುಚಿತವಿರುವದು
ಒಳ್ಳೆಯ ರಾಜನ ನೀತಿಯೆ ಇದುವೆ ॥ ೧೩೭ ॥

ಮೊದಲಿಗೆ ಕಾರ್ಯದ ಯೋಚನೆ ಮಾಡದೆ
ಕೊನೆಯಲಿ ಮಾಡಿದುದಾದರೆ ಈ ಪರಿ
ವೈರಿಯ ಬಲವನು ತಿಳಿಯದೆ ಎಲ್ಲರು
ಮಿಡುಕುವ ರೀತಿಯು ಬಾರದೆ ಇರದು ॥ ೧೩೮ ॥

ಆದುದು ಆಗಲಿ ತಪ್ಪೇ ಇದ್ದರು
ರಕ್ಷಿಪೆ ನಿನ್ನನು ಚಿಂತೆಯ ಬಿಡು ನೀ
ರಾಮ ಲಕ್ಷ್ಮಣರ ಕೊಲ್ಲುವೆನಲ್ಲದೆ
ಕಪಿಗಳ ತಿನ್ನುವೆ ಎಲ್ಲರ ನಾನು ॥ ೧೩೯ ॥

ತನ್ನಯ ಕಾರ್ಯದಿ ತಪ್ಪನು ಹೊರಿಸುತ
ಹೇಳಿದ ತಮ್ಮನ ಮಾತನು ಕೇಳುತ
ರಾವಣ ಮನದಲಿ ಸಿಟ್ಟನು ತಾಳಿದ
ಆಗಲೆ ಅಂದನು ಮಹಾಪಾರ್ಶ್ವನು ॥ ೧೪೦ ॥

ಕಾಡಲಿ ಹೋಗುತ ಜೇನನು ಸವಿಯದೆ
ಬಂದರೆ ಎಲ್ಲರು ಮೂರ್ಖನು ಅನ್ನರೆ ?
ಸಬಲನು ಶೂರನು ಆಗಿಹ ನೀನು
ವೈರಿಯ ತಲೆಯನು ಮೆಟ್ಟುತ ಹೆದರದೆ ॥ ೧೪೧ ॥

ಸೀತೆಯ ಭೋಗಿಸು ಕೇಳದೆ ಯಾರನು
ಕೋಳಿಯು ಇರುವದು ಹುಂಜಕೆ ಅಲ್ಲವೆ
ಆದುದು ಆಗಲಿ ಭೋಗಿಸು ಮೊದಲಿಗೆ
ಬಂದುದು ಎದುರಿಸಿ ಗೆಲ್ಲುವ ನಂತರ ॥ ೧೪೨ ॥

ಯಾರೇ ಬಂದರು ಯುದ್ಧವ ಮಾಡುವ
ಶಕ್ತಿಯು ಎಮಗಿದೆ ಚಿಂತೆಯು ಏತಕೆ
ಕುಂಭಕರ್ಣನೂ ಇಂದ್ರಜಿತುವೂ
ಇಬ್ಬರೆ ಗೆಲ್ಲುವರೆಲ್ಲರ ಅವರನು ॥ ೧೪೩ ॥

ಸಾಮದಾನಗಳ ಭೇದದ ನೀತಿಯು
ಹೇಳುವ ಜನವದು ಹೇಳುತ ಇರಲಿ
ದಂಡದ ನೀತಿಯೆ ಎಮ್ಮಯ ನೀತಿಯು
ದಂಡವೆ ಶಕ್ತರು ತೋರುವ ರೀತಿಯು || ೧೪೪ ||

ಕೇಳುತ ಈ ನುಡಿ ರಾವಣ ಚಿತ್ತವು
ಅರಳಿತು ಆಗಲೆ ನುಡಿದನು ರಾವಣ
ಕಾರಣವಿರುವದು ಎನ್ನಯ ಸಹನೆಗೆ
ಹಿಂದಕೆ ನಡೆದುದ ಹೇಳುವೆ ಕೇಳು || ೧೪೫ ||

**ರಾವಣನು ತನ್ನ ಹಿಂದಿನ ಘಟನೆಯನ್ನು ನೆನಸುವನು**

ಹಿಂದಕೆ ಗಗನದ ಮಾರ್ಗದಿ ಹೋಗುವ
ಸಮಯದಿ ಕಂಡೆನು ಅಪ್ಸರೆಯೊಬ್ಬಳ
ಹೆಸರದು ಅವಳಿಗೆ ಪುಂಜಿಕಸ್ಥಲೆಯು
ಬ್ರಹ್ಮಲೋಕದೆಡೆ ಹೊರಟಿಹ ಅವಳು || ೧೪೬ ||

ಎನ್ನನು ನೋಡುತ ಹೆದರಿಕೆಯಿಂದಲಿ
ಮರೆಯಲಿ ಹೋಗಲು ಯತ್ನವ ಮಾಡಲು
ಕಾಣುತ ಸುಂದರ ರೂಪವ ನಾನು
ಸೋಲುತ ರೂಪಕೆ ಹಿಡಿದೆನು ಅವಳನು || ೧೪೭ ||

ಒಲ್ಲೆನು ಎಂದರು ಬಿಡದಲೆ ಅವಳನು
ವಿವಸ್ತ್ರಗೊಳಿಸುತ ಭೋಗಿಸುತಾಗಲೆ
ಬಿಟ್ಟೆನು ನಂತರ ಹೋಗಲು ಅವಳಿಗೆ
ತಿಳಿಯಿತು ಅದುವೆ ಬ್ರಹ್ಮದೇವನಿಗೆ || ೧೪೮ ||

ಕುಪಿತನು ಆಗುತ ಶಾಪವ ಕೊಟ್ಟನು
ಯಾವುದೆ ಸ್ತ್ರೀಯಳ ಇಚ್ಛೆಯ ಕೇಳದೆ
ಭೋಗಿಸಿಯಾದರೆ ಸಾಯುವೆ ನೀನು
ಆಗುತ ತಲೆಯಿದು ಶತಶತ ಹೋಳು || ೧೪೯ ||

ಕಾರಣ ಸೀತೆಗೆ ಬಲವದು ಸಲ್ಲದು
ರಾಮಗೆ ಅಂಜುವ ಕಾರಣವೇನಿದೆ ?
ತಿಳಿಯನು ರಾಮನು ಎನ್ನಯ ಬಲವನು
ಕೇಳುತ ಈ ನುಡಿ ವಿಭೀಷಣನೆಂದ || ೧೫೦ ||

**ವಿಭೀಷಣನ ಬೋಧನೆ**

ಪಾಪದ ಕಾರ್ಯದಿ ಹಟವದು ಏತಕೆ
ರಾಮನ ಬಾಣವ ತಡೆಯರು ಯಾರೂ
ಇಲ್ಲಿಯ ಮಾತಿನ ಮಲ್ಲರು ನಿಜಕೂ
ಅರಿಯರು ರಾಮನ ಬಾಣದ ಶಕ್ತಿಯ || ೧೫೧ ||

ಸೀತೆಯ ಕಳಿಸುತ ಸಂಧಿಯ ಮಾಡುವ
ಒಂದೇ ಮಾರ್ಗವು ಉಚಿತವು ತಿಳಿ ನೀ
ಪ್ರಹಸ್ತನಾಗಲೆ ಅಂದನು ನಡುವೆಯೆ
ಜಗದಲಿ ಹೆದರಿಕೆಯೆಂದರೆ ಏನದು || ೧೫೨ ||

ಯಾರಿಗು ಎಂದಿಗು ಸೋತೇ ಇಲ್ಲಾ
ಅಂಜಿಕೆ ಎಮಗದು ಹೇಳುವ ವಿಷಯವೆ
ದೇವರ ದಾನವರೆಲ್ಲರ ಗೆದ್ದಿಹ
ನಮಗದು ರಾಮನ ವಿಷಯವು ದೊಡ್ಡದೆ ? || ೧೫೩ ||

ವಿಭೀಷಣನಾಗ ಉಸುರಿದ ಅವನಿಗೆ
ಪ್ರಹಸ್ತ ನಿನ್ನಯ ಮಾತಿದು ಸಲ್ಲದು
ರಾಮನ ಶಕ್ತಿಯ ಕಲ್ಪನೆ ಇಲ್ಲದೆ
ಆಡಿದ ಮಾತಿದು ತ್ಯಾಜ್ಯವು ನಿಶ್ಚಿತ ॥ ೧೫೪ ॥

ಇಲ್ಲಿಯ ರಕ್ಕಸವೀರರು ಯಾರೂ
ತಡೆಯರು ರಾಮನ ಮಾರಕ ಅಸ್ತ್ರಕೆ
ಎಮ್ಮಯ ರಾಜನು ಕಾಮದ ವಶದಲಿ
ಸಿಕ್ಕಿಹ ಕಾರಣ ತಿಳಿಯನು ಏನೂ ॥ ೧೫೫ ॥

ಅಣ್ಣನ ಸಹಜದ ಕಠೋರ ಮನಸಿಗೆ
ಬೆಂಬಲ ಕೊಡುತಲಿ ಅನ್ನುತಲಿರುವಿರಿ
ಮಿತ್ರರ ರೀತಿಯ ಹಿತವನು ಹೇಳಿರಿ
ಇಲ್ಲದೆ ಹೋದರೆ ಅಳಿಯುವಿರೆಲ್ಲಿರು ॥ ೧೫೬ ॥

ಹೇಳುವೆ ಮೊದಲಿಗೆ ಕೊನೆಗೂ ಒಂದೇ
ಸೀತೆಯ ಒಪ್ಪಿಸಿ ಸಂಧಿಯ ಮಾಡಿರಿ
ಕೇಳುತ ಈ ನುಡಿ ಮೇಘನಾದನು
ಅಂದನು ಕಕ್ಕನೆ ಹೇಡಿಯ ಮಾತಿದು ॥ ೧೫೭ ॥

ಇಂದ್ರಜಿತುವು ವಿಭೀಷಣನನ್ನು ಹಳಿದುದು

ಎಮ್ಮಯ ವಂಶದಿ ಹುಟ್ಟಿಹ ವೀರನು
ಯಾವನು ಕೂಡಾ ಹೇಳನು ಈ ಪರಿ
ಎಮ್ಮಯ ವಂಶದ ಹೆಮ್ಮೆಯ ತಿಳಿಯದ
ವ್ಯಕ್ತಿಯು ಅಂದರೆ ನೀನೇ ಒಬ್ಬನು ॥ ೧೫೮ ॥

ಪೌಲಸ್ತ್ಯರಾಗಿ ಶೌರ್ಯದ ಧೈರ್ಯದ
ಖಣಿಯಾಗಿರುತಿಹ ಎಮ್ಮನು ತಿಳಿಯದೆ
ಮಾನವರಿಬ್ಬರ ಹೆದರಿಕೆ ಸಾರುವ
ಹೇಡಿಯು ಆಗಿಹೆ ಕಕ್ಕನೆ ನೀನು || ೧೫೯ ||

ಲಂಕೆಯು ಯಾವನೆ ರಕ್ಕಸ ಕೂಡಾ
ರಾಮ ಲಕ್ಷ್ಮಣರ ಕೊಲ್ಲಲು ಸಾಧ್ಯವು
ಮಾನವರಿಬ್ಬರ ಕೊಲ್ಲುವ ವಿಷಯದಿ
ಅಚ್ಚರಿಯೇನಿಸಿದೆ ಹೇಳಿರಿ ಎಲ್ಲರು || ೧೬೦ ||

ತ್ರಿಲೋಕನಾಥನು ದೇವರಾಜನೂ
ಆಗಿಹ ಇಂದ್ರನ ತಂದೆನು ನಾನು
ದರದರ ಎಳೆಯುತ ಇಲ್ಲಿಗೆ ಅಲ್ಲವೆ
ಥರಥರ ನಡುಗಿತು ಸುರಗಣವೆಲ್ಲಾ || ೧೬೧ ||

ಓಡಿದರೆಲ್ಲರು ದಿಕ್ಕು ದಿಕ್ಕಿಗೆ
ನಾನೇ ಹೊಡೆದೆನು ಐರಾವತವನು
ಕಿರುಚುತ ಕಿರ್ರನೆ ಬಿದ್ದಿತು ಭೂಮಿಗೆ
ಕೋರೆಯು ಹಲ್ಲನೆ ಕಿತ್ತಿದೆ ನಾನು || ೧೬೨ ||

ದೇವತೆಯೆಲ್ಲರ ಸೊಕ್ಕನು ಅಡಗಿಸಿ
ದಾನವರೆಲ್ಲರ ದರ್ಪವ ಕರಗಿಸಿ
ಮೆರೆದಿಹ ನಾನು ಮಾನವರಿಬ್ಬರ
ವಧಿಸಲು ಆಗದೆ ಹೇಳಿರಿ ಎಲ್ಲರು || ೧೬೩ ||

ಇಂದ್ರಜಿತುವಿಗೆ ವಿಭೀಷಣನ ಉಪದೇಶ

ಕೇಳುತ ಈ ನುಡಿ ವಿಭೀಷಣನಾಗ
ನುಡಿದನು ಮಗುವೇ ಹಸುಳೆಯು ಇರುತಿಹೆ
ಮಂತ್ರಾಲೋಚನೆ ಮಾಡಲು ಬೇಕಿದೆ
ವಿವೇಚನ ಶಕ್ತಿ ಹಾಗೂ ಬುದ್ಧಿಯು || ೧೬೪ ||

ಜಂಬದ ಮಾತನು ಆಡಿದೆ ಬಹುಪರಿ
ಇದುವೇ ಎಲ್ಲವು ಆತ್ಮಘಾತುಕವು
ರಾವಣ ಪುತ್ರನು ಶತ್ರುವೆ ನಿಜಕೂ
ವಿವೇಕಶೂನ್ಯದ ಕೆಲಸಕೆ ಒಪ್ಪುವೆ || ೧೬೫ ||

ನೀನೇ ನಿಜಕೂ ದಂಡನೆಗರ್ಹನು
ಮಂತ್ರಾಲೋಚನೆ ಮಾಡಲು ಇಲ್ಲಿಗೆ
ನಿನ್ನನು ಕರೆದಿಹ ರಕ್ಕಸನಾರು
ಅವನೇ ನಿಜಕೂ ದಂಡನೆಗರ್ಹನು || ೧೬೬ ||

ವಿವೇಕಶೂನ್ಯನು ಹಟಮಾರಿಯಾಗಿ
ದುಡುಕಿನ ಹುಡುಗನು ಆಗಿಹೆ ನೀನು
ಮಂತ್ರಾಲೋಚನೆ ಸಭೆಯಲಿ ಕೂಡಲು
ಯೋಗ್ಯನು ಅಲ್ಲವು ಉದ್ಧಟ ಮಗುವೇ || ೧೬೭ ||

ಕ್ರೂರನು ಅಲ್ಲದೆ ಉದ್ಧಟನಿರುತಿಹೆ
ರಾಮನ ಬಾಣದ ಶಕ್ತಿಯ ಬಲ್ಲೆಯೊ
ಅಗ್ನಿಯ ಉಗುಳುತ ಬರುತಿಹ ಬಾಣವು
ಬ್ರಹ್ಮದಂಡವೂ ಯಮದಂಡವು ಸಹ || ೧೬೮ ||

ಸೀತೆಯ ಒಪ್ಪಿಸಿ ಕಾಣಿಕೆ ಸಲ್ಲಿಸಿ
ಸಂಧಿಯ ಮಾಡುತ ಯುದ್ಧವ ತಪ್ಪಿಸಿ
ರಾಕ್ಷಸ ಕುಲವನು ಲಂಕೆಯ ಸೊಬಗನು
ಉಳಿಸುವದೊಂದೇ ಮಾರ್ಗವು ಯೋಗ್ಯವು ॥ ೧೬೯ ॥

ರಾವಣನಿಂದ ವಿಭೀಷಣನ ಅವಹೇಳನೆ

ಕೇಳುತ ಈ ನುಡಿ ಕಿಡಿಕಿಡಿಯಾಗುತ
ರಾವಣನೆಂದನು ಕೇಳೈ ದುರುಳನೆ
ವೈರಿಯ ಸಂಗಡ ಬಾಳಲು ಸಾಧ್ಯವು
ಸರ್ಪದ ಕೂಡಾ ಇರಲೂ ಬಹುದು ॥ ೧೭೦ ॥

ಆದರೆ ವೈರಿಯ ಪಕ್ಷವ ವಹಿಸುತ
ಮಿತ್ರನ ತೆರದಲಿ ನಟಿಸುವ ಮನುಜನ
ಸಂಗಡ ಬಾಳಲು ಸಾಧ್ಯವೆ ಎಂದಿಗು
ಬಲ್ಲೆನು ಇರುತಿಹೆ ದಾಯಾದಿ ನೀನು ॥ ೧೭೧ ॥

ಎಮ್ಮಯ ಸಂಕಟ ನಿನ್ನಯ ಹರುಷವು
ಎಮ್ಮಯ ವೈಭವ ನಿನಗೋ ನೋವು
ಗೊತ್ತಿದೆ ನನಗೂ ದಾಯಾದಿ ಮನವು
ಬಂಧುಗೆ ಕಷ್ಟವು ನಿನಗದು ಇಷ್ಟವು ॥ ೧೭೨ ॥

ಹೃದಯದಿ ಇಂಗಿತ ಬೇರೆಯೆ ಇಟ್ಟು
ಮೇಲಕೆ ತೋರುವ ಸಂತಸ ಗುಟ್ಟು
ದಾಯಾದಿಯಾಗಿ ನಟಿಸುವೆ ಭಲೆಭಲೆ
ಕಾಡಿನ ಆನೆಯ ಹಿಡಿಯಲು ಎಲ್ಲಿಯು ॥ ೧೭೩ ॥

ಪಳಗಿದ ಆನೆಯೆ ಕಾರಣವಲ್ಲವೆ
ಅಂತೆಯೆ ನೀನೂ ಎಮ್ಮಯ ಸಂಕಟ
ಕಾಣುತ ಮನದಲಿ ಪಡುತಿಹೆ ಸಂತಸ
ಬೇರೆಯ ಯಾರೂ ಈ ಪರಿ ನುಡಿದಿರೆ || ೧೭೪ ||

ರುಂಡದ ಚಂಡನು ಆಡುತಲಿದ್ದೆನು
ಎಮ್ಮಯ ಕುಲದಲಿ ಹುಟ್ಟಿದ ಹೇಡಿಯೆ
ಸಾಕದು ನಿನ್ನಯ ಹೇಡಿಯ ನುಡಿಯು
ಧಿಕ್ಕಾರವಿರಲಿ ನಿನ್ನಯ ಖ್ಯಾತಿಗೆ || ೧೭೫ ||

ವಿಭೀಷಣನು ರಾವಣನನ್ನು ತೊರೆದು ಹೊರಟುದು

ಕೂಡಲೆ ಎದ್ದನು ವಿಭೀಷಣನಾಗ
ಹಿಡಿಯುತ ಗದೆಯನು ಗಗನಕೆ ಏರಿದ
ಜೊತೆಗೇ ಹೊರಟರು ನಾಲ್ವರು ಸಚಿವರು
ಎಲ್ಲರು ನಿಂತರು ಗಗನದಿ ಅಲ್ಲಿಯೆ || ೧೭೬ ||

ರಾಜನೆ ಇರುತಿಹೆ ಅಣ್ಣನು ಎನಗೆ
ತೋಚಿದುದೆಲ್ಲವ ಅನ್ನಲು ಯೋಗ್ಯನು
ಪೂಜ್ಯನು ಅಲ್ಲದೆ ತಂದೆಗೆ ಸರಿಸಮ
ಆದರೆ ಧರ್ಮದ ಮಾರ್ಗವ ಬಿಟ್ಟಿಹೆ || ೧೭೭ ||

ನಿನ್ನಯ ಒಳಿತಿಗೆ ಹೇಳಿದೆನೆಲ್ಲವ
ನೀತಿಯ ಮಾತನೆ ಹೇಳಿಹೆ ನಾನು
ಮನದಲಿ ಎಷ್ಟೂ ಕಿಲ್ಬಿಷವಿಲ್ಲವು
ಹೆದರದೆ ಹೇಳಿದೆ ಹಿತಕರ ಮಾತನು || ೧೭೮ ||

ಕಾಲನ ವಶದಲಿ ಬಂದಿಹ ಜನರಿಗೆ
ಬುದ್ಧಿಯು ಮಾತದು ಹಿಡಿಸದು ಎಂದಿಗು
ಪ್ರಿಯಕರ ಮಾತನು ಆಡುವ ಮನುಜರು
ಸಿಗುವರು ಎಲ್ಲೆಡೆ ಜಗದಲಿ ಇಂದು || ೧೭೯ ||

ಅಪ್ರಿಯ ಪಥ್ಯದ ಮಾತನು ಆಡುವ
ಕೇಳುವರಾರೂ ಸಿಕ್ಕರು ಎಲ್ಲಿಯೂ
ಕಾಲನ ಪಾಶವು ನಿನ್ನಯ ಕೊರಳಿಗೆ
ಸುತ್ತಿದೆ ಕಾರಣ ಕಳವಳವಾಯಿತು || ೧೮೦ ||

ಕಾರಣ ಹೇಳಿದೆ ಅನಿಸಿದುದೆಲ್ಲವ
ಮನಸಿಗೆ ಗಾಸಿಯು ಆದರೆ ಮನ್ನಿಸು
ಎನ್ನಯ ಅಣ್ಣನು ಗುರುವೂ ನೀನೇ
ನಿನ್ನಯ ಲಂಕೆಯ ರಕ್ಕಸಕುಲದ || ೧೮೧ ||

ರಕ್ಷಣೆಯೊಂದೇ ಎನ್ನಯ ಚಿಂತೆಯು
ಎನ್ನನು ಬಿಡುತಲಿ ನೆಮ್ಮದಿ ಸಿಕ್ಕರೆ
ಹೊರಟೆನು ಈಗಲೆ ತ್ಯಜಿಸುತ ನಿಮ್ಮನು
ಕಾಲನ ವಶದಲಿ ರುಚಿಸದು ನೀತಿಯು || ೧೮೨ ||

## ವಿಭೀಷಣನು ರಾಮನ ಕಡೆಗೆ ಬಂದುದು

ವಿಭೀಷಣ ಬಂದ ಸಚಿವರ ಸಂಗಡ
ಸಾಗರ ದಾಟುತ ರಾಮನ ಕಡೆಗೆ
ಬೆಟ್ಟದ ತೆರದಲಿ ಭೀಕರ ಕಾಯದ
ಮೇಘದ ವರ್ಣದ ವಿಭೀಷಣನಾಗ || ೧೮೩ ||

ಎಲ್ಲರು ತೊಟ್ಟಿಹ ಉಜ್ವಲ ಒಡವೆಯು
ಅಲ್ಲದೆ ತೊಟ್ಟಿಹ ಕವಚವ ಕೂಡಾ
ಮಿಂಚುತಲಿದ್ದವು ಗಗನದಿ ಎಲ್ಲವು
ಕೈಯಲಿ ಇದ್ದವು ವಿಧವಿಧ ಆಯುಧ || ೧೮೪ ||

ಕೂಡಲೆ ಕಂಡರು ಕಪಿವರರೆಲ್ಲರು
ವಾನರ ರಾಜನು ಕಾಣುತ ಅವರನು
ಕರೆದನು ಕಪಿವರ ವೀರರ ಎಲ್ಲರ
ಅಂದನು ಅವರಿಗೆ ನೋಡಿರಿ ಮೇಲಕೆ || ೧೮೫ ||

ರಾಕ್ಷಸನೋರ್ವನು ಬಂದಿಹನಿಲ್ಲಿಗೆ
ಆಯುಧ ಸಹಿತದಿ ಬಂದುದ ಕಾಣಿರಿ
ಎಮ್ಮನು ಕೊಲ್ಲಲು ಬಂದಿರಬಹುದು
ಎನ್ನಲು ಎದ್ದರು ಸಿದ್ಧರು ಆಗುತ || ೧೮೬ ||

ಸಾಗರ ತೀರದ ಉತ್ತರ ದಿಕ್ಕಿಗೆ
ಆಗಲೆ ಇಳಿದನು ವಿಭೀಷಣನು ಸಹ
ಧೀರನ ತೆರದಲಿ ನುಡಿದನು ಅವರಿಗೆ
ವಾನರ ವೀರರೆ ಕೇಳಿರಿ ಈ ನುಡಿ || ೧೮೭ ||

ರಾವಣ ರಾಕ್ಷಸ ಬಲ್ಲಿರಿಯಲ್ಲವೆ
ನಾನೇ ಅವನಿಗೆ ಅನುಜನು ಇರುವೆನು
ಎನ್ನಯ ನಾಮವು ವಿಭೀಷಣನೆಂದು
ರಾವಣ ಕೊಲ್ಲುತ ಜಟಾಯುವನ್ನು || ೧೮೮ ||

ತಂದಿಹ ಸೀತೆಯ ವನದಲಿ ಇಟ್ಟಿಹ
ರಾಮಗೆ ಒಪ್ಪಿಸಿ ಸಂಧಿಯ ಮಾಡಲು
ಎಷ್ಟೋ ಹೇಳಿದೆನಾದರು ಒಪ್ಪದೆ
ಎನ್ನನು ನಿಂದಿಸಿ ಅಟ್ಟಿದ ಹೊರಗಡೆ ॥ ೧೮೯ ॥

ಹೆಂಡಿರು ಮಕ್ಕಳ ತೊರೆಯುತ ಬಂದಿಹೆ
ರಾಮಗೆ ಶರಣನು ಆಗುತ ಬಂದಿಹೆ
ಕೂಡಲೆ ತಿಳಿಸಿರಿ ರಾಮಗೆ ವಿಷಯವ
ಸುಗ್ರೀವ ನೋಡಿದ ರಾಮನ ಕಡೆಗೆ ॥ ೧೯೦ ॥

## ಸುಗ್ರೀವನ ವಿಚಾರಸರಣಿ

ರಾವಣನನುಜನು ವಿಭೀಷಣನೀಗ
ಬಂದಿಹನಿಲ್ಲಿಗೆ ಅಣ್ಣನ ತೊರೆಯುತ
ನಿನ್ನಯ ರಕ್ಷಣೆ ಬೇಡುತಲಿರುವನು
ಎಚ್ಚರವಹಿಸುತ ವಿಚಾರ ಮಾಡಿರಿ ॥ ೧೯೧ ॥

ವೈರಿಯ ಕಾರ್ಯದ ವಿವೇಚನೆ ಇರಲಿ
ಗೂಢಚಾರನೇ ಇರುವನೊ ಏನೋ
ಕಾಮರೂಪಿಗಳು ಮಾಯಾವಿಗಳೂ
ಅಲ್ಲದೆ ಬಲ್ಲರು ಕಪಟೋಪಾಯವ ॥ ೧೯೨ ॥

ಎಂದಿಗು ನಂಬದು ರಕ್ಕಸ ಜನರನು
ಎಮ್ಮಲಿ ಬೆರೆಯುತ ಭೇದವ ಹುಟ್ಟಿಸಿ
ಸಮಯವ ಕಾಯುತ ಕೊಲ್ಲುವರೆಮ್ಮನು
ವೈರಿಯ ಜನರನು ನಂಬುವದೆಂತು ? ॥ ೧೯೩ ॥

ಇಲ್ಲಿಗೆ ಬಂದಿಹ ರಾಕ್ಷಸರ್ಯಾವರ
ಬಂಧಿಸಿ ದಂಡನೆ ನೀಡುವದೊಳಿತು
ವಾನರರಾಜನ ಮಾತನು ಕೇಳುತ
ರಾಮನು ಅಂದನು ವೀರರೆ ಕೇಳಿರಿ || ೧೯೪ ||

ನಿಮ್ಮಯ ರಾಜನ ಸಲಹೆಯ ತಿಳಿದಿರಿ
ನೀವೂ ಹೇಳಿರಿ ನಿಮ್ಮಯ ವಿಚಾರ
ಎಲ್ಲರು ಚರ್ಚಿಸಿ ವಿಷಯವ ಅರಿಯುವ
ಹೇಳಿರಿ ನಿರ್ಭಯದಿಂದಲಿ ಎಲ್ಲರು || ೧೯೫ ||

**ಅಂಗದನ ವಿಚಾರ**

ಅಂಗದನೆಂದನು ವೈರಿಯ ತಮ್ಮನು
ಕಾರಣ ಶಂಕೆಯು ಇರುವದೆ ಮೇಲು
ಪರೀಕ್ಷೆ ಮಾಡದೆ ಒಪ್ಪಲು ಬಾರದು
ಠಕ್ಕರ ಹೃದ್ಗತ ತಿಳಿಯಲೆಬೇಕು || ೧೯೬ ||

ಸಾಧಕ ಬಾಧಕ ಚಿಂತಿಸಬೇಕು
ಸಾಧಕವಿದ್ದರೆ ಒಪ್ಪಲು ಯೋಗ್ಯವು
ಬಾಧಕವಿದ್ದರೆ ತ್ಯಾಜ್ಯವು ನಿಶ್ಚಿತ
ನಂತರ ನುಡಿದನು ಶರಭನು ಮುಂದೆ || ೧೯೭ ||

**ಶರಭನ ವಿಚಾರ**

ಗೂಢಚಾರರನು ನೇಮಿಸಿ ಈಗಲೆ
ಹೇಳಲಿ ಆತನು ಪರಿಕಿಸಿ ಅವರನು
ನಂತರ ಯೋಚನೆ ಮಾಡುವ ವಿಷಯವ
ಒಪ್ಪಿಗೆಯಾದರೆ ನಂತರ ಸೇರಿಸಿ || ೧೯೮ ||

**ಜಾಂಬುವಂತನ ವಿಚಾರ**

ಜಾಂಬವ ನುಡಿದನು ಕೇಳಿರಿ ಎಲ್ಲರು
ರಾಕ್ಷಸ ಬಂದಿಹ ಸಮಯವ ತಿಳಿಯಿರಿ
ಯುದ್ಧದ ಸಮಯದಿ ಬಂದಿಹ ಆತನು
ಯುದ್ಧದ ಸಿದ್ಧತೆ ನಡೆದಿದೆ ಅವರಲಿ ॥ ೧೯೯ ॥

ರಾಮನ ಕಾರಣ ಸೋಲಿದೆ ಎಂದು
ಎಂದೂ ತಿಳಿಯರು ಸೊಕ್ಕಿಲೆ ಇರುವರು
ಸಾಹಸ ಶಕ್ತಿಯು ವಿಪುಲತೆ ಇರುವದು
ಇಂತಹ ಸಮಯದಿ ಬಂದಿಹರೇತಕೆ ॥ ೨೦೦ ॥

ಕಾರಣ ಇವರನು ನಂಬಲೆ ಕೂಡದು
ನಂತರ ಮೈಂದವನೆಂದನು ಈ ಪರಿ
ಚಾರರ ಮುಖದಿಂ ಮಾತನು ಆಡಿಸಿ
ತಿಳಿಯಿರಿ ಮೆಲ್ಲನೆ ವಿಭೀಷಣಮನವ ॥ ೨೦೧ ॥

**ಹನುಮಂತನ ವಿಚಾರ**

ಭಾವನೆ ತಿಳಿಯುತ ಯೋಚಿಸಿ ಮುಂದಕೆ
ನಂತರ ನುಡಿದನು ಹನುಮನು ಕೊನೆಗೆ
ರಾಮನು ನೀನೇ ಪ್ರಜ್ಞನು ಇರುತಿಹೆ
ಎಲ್ಲವ ಬಲ್ಲವನಿದ್ದರು ಕೂಡಾ ॥ ೨೦೨ ॥

ಎನ್ನನು ಕೇಳಿಹೆ ಗೌರವಕಾಗಿಯೆ
ಹೇಳುವೆನಲ್ಲದೆ ವಾದಕೆ ಅಲ್ಲಾ
ಇತರರು ಸಚಿವರು ಹೇಳಿದ ರೀತಿಗೆ
ಪ್ರತಿಯೂ ಅಲ್ಲವು ತಿಳಿದಿರಿ ಎಲ್ಲರು ॥ ೨೦೩ ॥

ಮನಸಿಗೆ ಅನಿಸಿದುದೆಲ್ಲವ ಹೇಳುವೆ
ರಾವಣನನುಜನ ಪರಿಕಿಸಲೆಂದೇ
ಹೇಳಿದರಲ್ಲವೆ ಈಗಲೆ ಸಚಿವರು
ಪರಿಕಿಪ ವಿಧವದು ಯಾವದು ಹೇಳಿರಿ || ೨೦೪ ||

ಯಾವುದೆ ಕಾರ್ಯಕೆ ಹಚ್ಚಿದರಲ್ಲವೆ
ತಿಳಿಯುವೆವಾಗಲೆ ಕೆಲಸದ ಪರಿಯನು
ಎಲ್ಲಿಯೊ ಇದ್ದರೆ ಆಗಲೆ ಮಾತ್ರವೆ
ಗೂಢಚಾರರಿಂ ತಿಳಿಯಲು ಸಾಧ್ಯವು || ೨೦೫ ||

ಇಲ್ಲಿಯೆ ಎದುರಿಗೆ ಇರುತಿಹ ಸಮಯದಿ
ತಿಳಿಯುದೇಸಿದೆ ಆವನಲಿ ಹೆಚ್ಚಿಗೆ
ಇಲ್ಲಿಗೆ ಬರಲಿಕೆ ದೇಶದ ಕಾಲದ
ರೀತಿಯ ಹೇಳಿದರಾಗಲೆ ಸಚಿವರು || ೨೦೬ ||

ಚಿಂತನೆ ಮಾಡುತ ನೋಡಿದರೀಗಲೆ
ದೇಶವು ಕಾಲವು ಯುಕ್ತವು ಎನಿಸಿದೆ
ರಾವಣನಲ್ಲಿಯು ದೋಷವ ಅರಿಯುತ
ರಾಮನ ಗುಣಗಳ ತಿಳಿಯುತ ಆತನು || ೨೦೭ ||

ಯುದ್ಧದ ಸಮಯದಿ ಬಂದಿಹ ಸಮಯವೆ
ಯೋಗ್ಯವು ಎನಿಸಿದೆ ನಿಜಕೂ ನನಗೆ
ಮ್ಯೆಂದವ ಹೇಳಿದ ಪ್ರಶ್ನೆಯ ಮಾಡಲು
ಚಾರನು ಇದ್ದರೆ ತಿಳಿಯನೆ ಆತನು || ೨೦೮ ||

ಒಳ್ಳೆಯ. ಭಾವನೆಯಿಂದಲಿ ಬಂದರೆ
ಮನವದು ನೋಯುವದಿಲ್ಲವೆ ಅವನದು
ಇಂತಹ ಸಮಯದಿ ಬಂದಿಹ ಆತನ
ಸಂಗ್ರಹ ಮಾಡದೆ ಬಿಡುವದು ತರವೆ ? || ೨೦೯ ||

ಮುಖದಲಿ ಇರುವದು ಪ್ರಶಾಂತ ಕಳೆಯು
ಮಾತಲಿ ಇಲ್ಲವು ಏನೂ ಕೊಂಕು
ದುಷ್ಟನು ಎನ್ನುವ ಶಂಕೆಯು ಇಲ್ಲವು
ಅಲ್ಲದೆ ಬಂದಿಹ ದೃಢಚಿತ್ತನಾಗಿ || ೨೧೦ ||

ಮುಖವೂ ಮಾತೂ ಮನಸಿನ ಕನ್ನಡಿ
ಮನಸಿನ ಇಂಗಿತ ಮುಚ್ಚಲು ಆಗದು
ವಾಲಿಯು ವಧೆಯನು ಸುಗ್ರೀವ ಪಟ್ಟ
ಕೇಳಿಹ ಆತನು ಬಂದಿಹನಿಲ್ಲಿಗೆ || ೨೧೧ ||

ಇವನೂ ಇಚ್ಛಿಪ ರಾಜನು ಆಗಲು
ಬಂದಿಹನಿಲ್ಲಿಗೆ ಎಲ್ಲವ ತಿಳಿದು
ಸೇರಿಸಿ ಅವನನು ಎಮ್ಮಯ ಬಳಗದಿ
ಇದುವೇ ಎನ್ನಯ ಚಿಂತಿತ ಮನವಿಯು || ೨೧೨ ||

ರಾಮನೆ ಪ್ರಾಜ್ಞನು ಇರುತಿಹೆ ನೀನು
ಯೋಚಿಸಿ ಎಲ್ಲವ ಕಾರ್ಯವ ಮಾಡಿರಿ
ಎನ್ನಲು ಅರಳಿತು ರಾಮನ ವದನವು
ಅಂದನು ರಾಮನು ಮಿತ್ರರೆ ಕೇಳಿರಿ || ೨೧೩ ||

ಎನ್ನಲಿ ಮಿತ್ರನ ಭಾವವ ಹೊಂದುತ
ಯಾರೇ ಬಂದರು ಒಪ್ಪುವೆ ಅವರನು
ಆಗಲೆ ಅಂದನು ಸುಗ್ರೀವರಾಜ
ಸಂಕಟ ಸಮಯದಿ ಅಣ್ಣನ ಬಿಟ್ಟಿಹ || ೨೧೪ ||

ಆತನು ಎಮ್ಮನು ಬಿಡದೇ ಇರುವನೆ
ರಾಮನು ನಗುತಲಿ ನೋಡಿದ ಎಲ್ಲರ
ವಾನರರಾಜನ ಮಾತಿದು ಸರಿಯೇ
ಒಳ್ಳೆಯ ತೂಕದ ಮಾತೂ ಹೌದು || ೨೧೫ ||

ಶಾಸ್ತ್ರವ ಓದದೆ ಸೇವೆಯ ಮಾಡದೆ
ಇಂತಹ ಮಾತದು ಬಾರದು ಎಂದೂ
ಆದರು ಒಂದಿದೆ ಸೂಕ್ಷ್ಮದ ವಿಷಯವು
ಜಗದಲಿ ತಿಳಿದಿಹ ವಿಷಯವೆ ನಿಜಕೂ || ೨೧೬ ||

ರಾಜರ ವಂಶದಿ ವೈರಿಗಳಿರುವದು
ವಿಧದಲಿ ಎರಡೈ ತಿಳಿದಿರು ನೀನು
ಕುಲದಲಿ ಹುಟ್ಟಿದ ದಾಯಾದಿಗಳು
ಅಲ್ಲದೆ ಇತರರು ಎರಡನೆ ವಿಧವು || ೨೧೭ ||

ಸಮಯವ ಕಾಯುತ ದಾಯಾದಿಗಳು
ಏಟನು ಕೊಡುವರು ನಿಶ್ಚಿತ ಸಮಯದಿ
ಒಳ್ಳೆಯ ಬಂಧುಗಳಲ್ಲಿಯು ರಾಜರು
ಸಂಶಯ ಹೊಂದುವರೆಂಬುದು ನಿಜವು || ೨೧೮ ||

ಎಮ್ಮಯ ಬಗೆಗೇ ಯೋಚಿಸಬೇಕಿರೆ
ವಿಭೀಷಣ ಎಮಗೆ ದಾಯಾದಿಯಲ್ಲ
ಅವನಲಿ ಹುಟ್ಟದೆ ರಾಜ್ಯದ ಆಶೆಯು
ರಾಕ್ಷಸರಲ್ಲಿಯು ಚಾಣಾಕ್ಷರಿಹರು || ೨೧೯ ||

ಬಂದಿಹ ಇವನನು ಸಂಗ್ರಹ ಮಾಡುವ
ಯೋಚನೆಯೊಂದೇ ಸದ್ಯಕೆ ಯೋಗ್ಯವು
ಬಂಧುಗಳೆಲ್ಲರು ಎಂದೂ ಇರರು
ಎನ್ನಯ ಬಂಧುವು ಭರತನ ತೆರದಲಿ || ೨೨೦ ||

ಸುಗ್ರೀವನೆಂದ ರಾಮುಗೆ ನಮಿಸುತ
ರಾವಣ ಕಳಿಸಿಹ ಇವನನು ಇಲ್ಲಿಗೆ
ಕೇವಲ ಚಾರರ ಕೆಲಸವ ಮಾಡಲು
ತಿಳಿಯುತ ನಿನ್ನಯ ಕೋಮಲ ಮನವನು || ೨೨೧ ||

ರಾವಣ ಪ್ರೇರಿತ ಕುಟಿಲದ ಬುದ್ಧಿಯ
ಬಂದಿಹನೀತನು ಕೊಲ್ಲಲು ಎಮ್ಮನು
ಲಕ್ಷ್ಮಣ ನಿನ್ನನು ಇಲ್ಲವೆ ನನ್ನನು
ಕೊಲ್ಲಲು ಬಂದಿಹ ಎನ್ನಯ ಸಂಶಯ || ೨೨೨ ||

ಯೋಚಿಸಿ ಅಂದನು ರಾಮನು ಆಗಲೆ
ಯೋಗ್ಯನೆ ಇರಲಿ ಕೇಡಿಗನಿರಲಿ
ಎನ್ನನು ಏನೂ ಮಾಡಲು ಆಗದು
ಹಿಂದಕೆ ಮಹರ್ಷಿ ಕಣ್ವನ ಮಗನು || ೨೨೩ ||

ಕಂಡುವು ಎಂಬುವ ಮಹರ್ಷಿ ಇದ್ದನು
ಅವನೇ ಹೇಳಿದ ಮಾತಿದೆ ಒಂದು
ದೈನ್ಯದಿ ಯಾರೇ ಶರಣಾಗತನು
ಬಂದರೆ ಅವರನು ರಕ್ಷಿಪುದೆಂದು || ೨೨೪ ||

ರಕ್ಷಿಸಲಾರದೆ ಬಿಟ್ಟರೆ ಆಗಲೆ
ಕಾರಣ ಬಂದಿಹ ವ್ಯಕ್ತಿಯು ಸತ್ತರೆ
ಯೋಗ್ಯನ ಪುಣ್ಯದ ಸಂಚಯವೆಲ್ಲವು
ಪೋಪುದು ಸತ್ತಿಹ ವ್ಯಕ್ತಿಯ ಜೊತೆಗೆ || ೨೨೫ ||

ಅಲ್ಲದೆ ಕೀರ್ತಿಯ ಕಲಶವು ಇದುವೇ
ಇಲ್ಲದೆ ಹೋದರೆ ತೇಜೋಬಲಗಳು
ಕ್ಷೀಣಿಸಿ ಹೋಗುತ ಮರೆಯಾಗುವವು
ಕಂಡು ಮಹರ್ಷಿಯ ನೀತಿಯ ವಚನವು || ೨೨೬ ||

ಇರುವದು ನಿಜಕೂ ದಾರಿದೀಪವೇ
ಅಲ್ಲದೆ ಒಳ್ಳೆಯ ಫಲವನು ಕೊಡುವದು
ಸ್ವರ್ಗವ ಪಡೆಯುವ ಪುಣ್ಯವ ಕೊಡುವದು
ಕಾರಣ ಅಭಯವ ಕೊಡುವೆನು ಅವನಿಗೆ || ೨೨೭ ||

ಯಾರೇ ಬರುತಲಿ ಶರಣಾಗುತಲಿ
ನಿನ್ನಲಿ ಶರಣನು ಎನ್ನುತ ಯಾಚಿಸೆ
ಅವನನು ರಕ್ಷಿಪುದೊಂದೇ ಎನ್ನಯ
ಧರ್ಮವು ಎನ್ನುತ ತಿಳಿದಿಹೆ ನಾನು || ೨೨೮ ||

ಜಗದಲಿ ಯಾರೇ ಎನ್ನನು ಚಿಂತಿಸಿ
ಅಭಯವ ಬೇಡಲು ಕೊಡಲಿಕೆ ಸಿದ್ಧನು
ಇದುವೇ ಎನ್ನಯ ನೀತಿಯು ವ್ರತವು
ಅಲ್ಲದೆ ಎನ್ನಯ ಗುಟ್ಟಿದೆ ತಿಳಿದಿರು || ೨೨೯ ||

ಇಷ್ಟೇ ಏಕೆ ರಾವಣ ಬರುತಲಿ
ಕ್ಷಮೆಯನು ಕೇಳುತ ಅಭಯವ ಬೇಡಲು
ಅದಕೂ ಸಿದ್ಧನು ಸಂಶಯ ಬೇಡಾ
ಕೇಳುತ ಈ ನುಡಿ ಕರಗಿದ ಮನದಲಿ || ೨೩೦ ||

ಸುಗ್ರೀವನ ಒಪ್ಪಿಗೆ

ಸುಗ್ರೀವನೆಂದ ನರವರ ರಾಮನೆ
ನಿನ್ನಯ ಮನದಲಿ ಇರುತಿಹ ಜ್ಯೋತಿಯ
ಕಂಡೆನು ಈಗಲೆ ಕತ್ತಲೆ ಹರಿಯಿತು
ನನಗೂ ಕೂಡಾ ಹಾಗೆಯೆ ಅನಿಸಿದೆ || ೨೩೧ ||

ನಿನ್ನಯ ಹನುಮನ ವಾಣಿಯ ಕೇಳುತ
ಎನ್ನಯ ಮನವೂ ಸಿದ್ಧತೆ ಹೊಂದಿದೆ
ಎಮ್ಮಯ ಜೊತೆಗೇ ಸುಖದಲಿ ದುಃಖದಿ
ಭಾಗಿಯು ಆಗಲು ಕರೆಯಿರಿ ಅವನನು || ೨೩೨ ||

ಇಂದಿನ ದಿನದಿಂ ಎಮ್ಮಯ ಮಿತ್ರನು
ಆಗಲಿ ಅವನೂ ಎಮ್ಮಲಿ ಒಬ್ಬನು
ರಾಮನು ಹೇಳಿದ ಕರೆಯಲು ಅವನನು
ಭೂಮಿಗೆ ಇಳಿದನು ವಿಭೀಷಣನಾಗ || ೨೩೩ ||

ಹಿಂದೆಯೆ ಬಂದರು ಸಚಿವರು ನಾಲ್ವರು
ನಮಿಸುತ ರಾಮನ ಪಾದಕೆ ಎಲ್ಲರು
ನಿಂದರು ರಾಮನ ಎದುರಿಗೆ ಅವರು
ವಿಭೀಷಣನಾಗ ನುಡಿದನು ಈ ಪರಿ ॥ ೨೩೪ ॥

### ರಾಮನಲ್ಲಿ ವಿಭೀಷಣನ ಕೋರಿಕೆ

ರಾಮನೆ ಇರುವೆನು ರಾವಣನನುಜನು
ಬಂದಿಹೆನಿಲ್ಲಿಗೆ ಶರಣಾಗತನು
ಅಣ್ಣನು ಮಾಡಿದ ಅಪಮಾನವನು
ಸಹಿಸದೆ ಬಂದಿಹೆ ರಕ್ಷಣೆ ಕೋರಲು ॥ ೨೩೫ ॥

ಲಂಕೆಯು ತೊರೆಯುತ ಬಂದಿಹೆ ನಾನು
ಹೆಂಡಿರು ಮಕ್ಕಳ ವೈಭವ ಗೆಳೆಯರ
ತೊರೆಯುತ ಎಲ್ಲವ ಬಂದಿಹೆನಿಲ್ಲಿಗೆ
ಎನ್ನಯ ರಾಜ್ಯದ ಜೀವಿತ ಸೌಖ್ಯದ ॥ ೨೩೬ ॥

ರಕ್ಷಣೆ ಎಲ್ಲವ ಬಿಟ್ಟಿಹೆ ನಿನಗೇ
ನೀನೇ ಎನ್ನಯ ರಕ್ಷಕ ಒಡೆಯನು
ಹೆಚ್ಚಿಗೆ ಹೇಳುವದೇನಿದೆ ಈಗ
ಎನ್ನಲು ರಾಮನು ಅಂದನು ಆಗಲೆ ॥ ೨೩೭ ॥

### ಶ್ರೀರಾಮನ ಅಭಯ ವಚನ

ಎನ್ನಯ ಅಭಯವು ರಕ್ಷೆಯು ಇರುವದು
ಚಿಂತೆಯು ಬೇಡಾ ಸಂಶಯ ಬೇಡಾ
ಲಂಕೆಯ ಒಳಗಿನ ರಕ್ಕಸ ಬಲದಲಿ
ಇರುತಿಹ ಶಕ್ತಿಯ ಪರಿಚಯ ಮಾಡೈ ॥ ೨೩೮ ॥

## ರಾಕ್ಷಸರ ಶಕ್ತಿಯ ಬಗ್ಗೆ ವಿಭೀಷಣನು ಹೇಳಿದುದು

ವಿಭೀಷಣನಾಗ ನುಡಿದನು ಈ ಪರಿ
ರಾಮನೆ ಕೇಳೈ ರಾವಣ ಶಕ್ತಿಯ
ವರವನು ಪಡೆದಿಹ ಬ್ರಹ್ಮನಿಂದಲೇ
ದೇವರು ದಾನವ ರಾಕ್ಷಸರಾರೂ || ೨೩೯ ||

ವಧಿಸಲು ಅವನನು ಸಾಧ್ಯವು ಆಗದು
ಅವನಿಗೆ ತಮ್ಮನು ಎನಗೋ ಅಣ್ಣನು
ಹೆಸರಿದೆ ಅವನದು ಕುಂಭಕರ್ಣನು
ಮಹಾವೀರನೂ ತೇಜಸ್ವಿಯಿಹನು || ೨೪೦ ||

ಯುದ್ಧದಿ ಇಂದ್ರಗೆ ಸರಿಸಮ ಆತನು
ರಾವಣ ಸೇನೆಯ ಅಧಿಪತಿ ಪ್ರಹಸ್ತ
ಕೈಲಾಸದಲ್ಲಿಹ ಕುಬೇರನ ಪಡೆಯ
ಅಧಿಪತಿ ಮಣಿಭದ್ರನನು ಗೆದ್ದಿಹ || ೨೪೧ ||

ರಾವಣಕುವರನು ಇಂದ್ರಜಿತುವೋ
ಅತಿಅತಿ ಶೂರನು ಮಾಯಾವಿಯು ಸಹ
ಗೋಧಾ ಚರ್ಮದ ಅಂಗುಲಿ ತ್ರಾಣವ
ಅಲ್ಲದೆ ಅಭೇದ್ಯ ಕವಚವ ತೊಡುತಲಿ || ೨೪೨ ||

ಬಿಲ್ಲನು ಹಿಡಿಯುತ ಯುದ್ಧಕೆ ಬಂದರೆ
ಯುದ್ಧವ ಮಾಡುತ ಆಗುವನದೃಶ್ಯ
ಕಾಣರು ಯಾರೂ ಅವನನು ಯುದ್ಧದಿ
ಬಾಣಗಳಿಂದಲೆ ತಿಳಿಯಲು ಸಾಧ್ಯವು || ೨೪೩ ||

ಯುದ್ಧಕೆ ಮೊದಲಿಗೆ ಹೋಮವ ಮಾಡುತ
ಪಡೆಯುತ ಅದಮ್ಯ ಶಕ್ತಿಯ ಆತನು
ಬರುವನು ರಣದಲಿ ವ್ಯೂಹವ ರಚಿಸುತ
ಕೊಲ್ಲುವ ವೈರಿಯ ಅದೃಶ್ಯನಾಗಿ || ೨೪೪ ||

ಅಲ್ಲದೆ ಇರುವರು ಮಹೋದರನೆಂದೂ
ಮಹಾಪಾರ್ಶ್ವನೂ ಅಕಂಪನೂ ಸಹ
ಸೇನಾಪತಿಗಳು ಇರುವರು ಇವರು
ಬಲದಲಿ ಸರಿಸಮ ದಿಕ್ಪಾಲಕರಿಗೆ || ೨೪೫ ||

ಅಲ್ಲದೆ ಇರುವರು ಅಸಂಖ್ಯ ಜನರು
ಕೊಬ್ಬಿದ ರಕ್ಕಸ ಕಾಮರೂಪಿಗಳು
ರಾವಣ ಗೆದ್ದಿಹ ದಿಕ್ಪಾಲಕರನು
ಅಲ್ಲದೆ ಗೆದ್ದಿಹ ದೇವತೆಗಳನೂ || ೨೪೬ ||

ಶ್ರೀರಾಮನ ನುಡಿ

ರಾಮನು ನುಡಿದನು ಆಗಲೆ ಅವನಿಗೆ
ನಂಬುವೆ ನಿನ್ನಯ ಮಾತನು ಎಲ್ಲವ
ಕೇಳಿದೆ ರಕ್ಕಸವೀರರ ಸಾಹಸ
ಕೊಲ್ಲುತ ಎಲ್ಲರ ಪಟ್ಟವ ಕಟ್ಟುತ || ೨೪೭ ||

ನಿನ್ನನು ಮಾಡುವೆ ಲಂಕೆಗೆ ಅಧಿಪತಿ
ನಿಜವಿದು ನಿಶ್ಚಿತ ಸಂಶಯ ಬೇಡಾ
ರಾವಣ ಹೊಕ್ಕರೂ ಪಾತಾಳವನೂ
ಅಲ್ಲದೆ ಸೇರಲಿ ರಸಾತಳವನೂ || ೨೪೮ ||

ಹೋಗಲಿ ಬೇಡಲಿ ಬ್ರಹ್ಮನ ಪೊರೆಯನು
ಎಂದಿಗೂ ಬಿಡೆನು ಜೀವದ ಸಹಿತದಿ
ರಾವಣ ಅಲ್ಲದೆ ಮಕ್ಕಳು ಬಂಧುವ
ಕೊಲ್ಲದೆ ಎಂದೂ ಮರಳುವದಿಲ್ಲಾ || ೨೪೯ ||

ಎನ್ನಯ ಮೂವರು ಅನುಜರ ಆಣೆಯು
ಆಡಿದ ಮಾತಿಗೆ ತಪ್ಪುವದಿಲ್ಲಾ
ನಂತರ ನಮಿಸುತ ವಿಭೀಷಣನೆಂದ
ರಾಮನೆ ಲಂಕೆಯ ಯುದ್ಧದಿ ನಾನೂ || ೨೫೦ ||

ಸಾಧ್ಯವು ಇದ್ದುದು ಎಲ್ಲವ ಮಾಡುವೆ
ಎನ್ನಯ ಶಕ್ತಿಯು ನಿನಗೇ ಮೀಸಲು
ನಿನ್ನಯ ಸೇನೆಯ ಪಡೆಯಲಿ ಸೇರುತ
ಯುದ್ಧವ ಮಾಡುವೆ ನಿಮ್ಮಯ ಜೊತೆಗೇ || ೨೫೧ ||

**ವಿಭೀಷಣನು ಲಂಕೆಯ ರಾಜನೆಂದು ಘೋಷಣೆ**

ರಾಮನು ಅಪ್ಪಿದ ಸುಪ್ರೀತನಾಗಿ
ಕೂಡಲೆ ಕರೆದನು ಲಕ್ಷ್ಮಣನನ್ನು
ಜಲವನು ತರುತಲಿ ಸಾಗರದಿಂದಲಿ
ಅಭಿಷೇಕ ಮಾಡು ರಕ್ಕಸರಾಜಗೆ || ೨೫೨ ||

ಈಗಲೆ ಘೋಷಿಸು ವಿಭೀಷಣನನ್ನು
ರಕ್ಕಸರಾಜನು ಇರುವನು ಎಂದು
ಅಂತೆಯೆ ಮಾಡುತ ಲಕ್ಷ್ಮಣನಾಗಲೆ
ಘೋಷಣೆ ಮಾಡಿದ ರಕ್ಕಸರಾಜನ || ೨೫೩ ||

ನಂತರ ಹನುಮನು ಸುಗ್ರೀವನು ಸಹ
ಕಾಣುತ ರಕ್ಕಸರಾಜನ ಆಗಲೆ
ಕೇಳಿದರವನಿಗೆ ಸಾಗರ ದಾಟುವ
ಮಾರ್ಗವು ಯೋಗ್ಯವು ಯಾವುದು ಎಂದು ॥ ೨೫೪ ॥

## ಸಮುದ್ರ ದಾಟಲು ವಿಭೀಷಣನ ಸಲಹೆ

ಉತ್ತರವಿತ್ತನು ವಿಭೀಷಣನಿಂತು
ಸಗರನ ದೆಯೆಯಿಂ ಸಾಗರವಾಗಿದೆ
ರಾಘವನಿರುವನು ಸಗರನ ವಂಶಜ
ಋಣವನು ತೀರಿಸಲಿದುವೆ ಸಮಯವು ॥ ೨೫೫ ॥

ರಾಮನು ಈಗಲೆ ಪ್ರಾರ್ಥನೆಗೈಯಲಿ
ಕೇಳಲಿ ಸಮುದ್ರರಾಜಗೆ ರಾಮನು
ಸಾಗರ ಮಧ್ಯದಿ ಮಾರ್ಗವ ತೋರಲು
ಲಂಕೆಗೆ ಹೋಗಲು ಕಪಿಗಳ ಸಹಿತದಿ ॥ ೨೫೬ ॥

ಸಾಗರ ಒಪ್ಪುವ ಋಣವನು ನೆನೆದು
ಎನ್ನಲು ಹೊರಟರು ರಾಮನ ಕಡೆಗೆ
ತಿಳಿಸಿದರವನಿಗೆ ವಿಭೀಷಣ ಸಲಹೆ
ರಾಮನು ಕೂಡಲೆ ಒಪ್ಪುತ ಅಂದನು ॥ ೨೫೭ ॥

ಸಲಹೆಯು ಯುಕ್ತವು ಒಪ್ಪಿತು ಎನಗೂ
ಆದರು ಕೇಳುವೆ ಹೇಳಿರಿ ಯೋಚಿಸಿ
ಸುಗ್ರೀವನಿಹನು ರಾಜನೀತಿಜ್ಞ
ಹನುಮನು ಇರುವನು ಚತುರನು ಮಂತ್ರಿಯು ॥ ೨೫೮ ॥

ಯೋಚಿಸಿ ಹೇಳಿರಿ ಇಬ್ಬರು ಎನಗೆ
ಮಾಡುವೆ ಅಂತೆಯೆ ನಿಶ್ಚಿತ ತಿಳಿಯಿರಿ
ಇಬ್ಬರು ಅಲ್ಲದೆ ಲಕ್ಷ್ಮಣ ಕೂಡಾ
ವಿಭೀಷಣ ಸಲಹೆ ಯೋಗ್ಯವು ಎಂದರು ‖ ೨೫೯ ‖

ರಾಮನು ಮಲಗಿದ ದರ್ಭೆಯು ಹರಡುತ
ಸಾಗರ ತೀರದಿ ಎಲ್ಲರ ಎದುರಲಿ
ಸಮುದ್ರರಾಜನ ನೆನಸುತ ಮನದಲಿ
ಲಂಕೆಗೆ ಹೋಗಲು ದಾರಿಯ ಕೋರಿ ‖ ೨೬೦ ‖

**ರಾವಣನ ತಂತ್ರ**

ಸಾಗರ ತೀರದಿ ಕಪಿಗಳ ಸಾಗರ
ನೋಡುತ ಶಾರ್ದೂಲ ರಕ್ಕಸನಾಗ
ಬಂದನು ಲಂಕೆಗೆ ರಾವಣನೆದುರಿಗೆ
ಉಸುರಿದ ರಾಮನ ಸೇನೆಯು ಬಂದುದು ‖ ೨೬೧ ‖

ಸಾಮದಾನದಿಂ ಭೇದದಿ ಇಲ್ಲವೆ
ವೈರಿಯ ಸೇನೆಯ ತಡೆಯುವದೊಳಿತು
ಯೋಚಿಸಿ ರಾವಣ ಕರೆದನು ಶುಕನನು
ಅಂದನು ಅವನಿಗೆ ಕೇಳೈ ನೀನು ‖ ೨೬೨ ‖

ಕುಟಿಲ ತಂತ್ರದಲಿ ಬಲ್ಲಿದ ನೀನು
ಈಗಲೆ ಹೋಗುತ ಸುಗ್ರೀವನೆಡೆಗೆ
ಹೇಳೀ ಮಾತನು ಮೆಲ್ಲಗೆ ಅವನಿಗೆ
ವಾನರರಾಜನೆ ನೀನಿಹೆ ಶೂರನು ‖ ೨೬೩ ‖

ಋಕ್ಷರಜಸ್ಸಿನ ಪುತ್ರನು ನೀನಿಹೆ
ರಾಮಗೆ ಯುದ್ಧದಿ ಬೆಂಬಲ ಕೊಡುತಿಹೆ
ನಿನ್ನಯ ಕಪಿಗಳು ಸಾಗರ ದಾಟಲು
ಸಾಧ್ಯವೆ ಆಗದು ಹೋಗೆಲೊ ಮರಳುತ || ೨೬೪ ||

ಸಂದೇಹ ಸಹಿತ ಹೊರಟನು ಶುಕನು
ಪಕ್ಷಿಯ ವೇಷವ ಧರಿಸುತ ಹಾರಿದ
ಆಗಸದಿಂದಲೆ ಸುದ್ದಿಯ ತಿಳಿಸಿದ
ಕಪಿಗಳು ಹಿಡಿಯುತ ಕುಕ್ಕಿದರವನನು || ೨೬೫ ||

ಕಿರುಚಿದನಾಗಲೆ ದೂತನು ಇರುವೆನು
ಬಂದಿಹೆ ಕೇವಲ ಸಂದೇಶ ನೀಡಲು
ಎನ್ನನು ಕೊಲ್ಲುವ ನೀತಿಯು ಸಲ್ಲದು
ರಾಮನು ನೀತಿಯ ಪುರುಷನು ಕೇಳಿಹೆ || ೨೬೬ ||

ಕೂಡಲೆ ರಾಮನು ಕೇಳುತ ಈ ನುಡಿ
ಅಂದನು ಕಪಿಗಳೆ ಹಿಂಸಿಸಬೇಡಿರಿ
ಬಿಟ್ಟರು ಅವನನು ಅಪ್ಪಣೆ ಪಾಲಿಸಿ
ಹಾರುತ ಗಗನದಿ ಮೇಲಕೆ ಅಂದನು || ೨೬೭ ||

ವಾನರ ರಾಜನೆ ಉತ್ತರವೇನದು
ತಿಳಿಸಲು ರಾವಣ ರಾಜಗೆ ನಾನು
ಎನ್ನಲು ಅಂದನು ಸುಗ್ರೀವನಾಗ
ದೂತನೆ ತಿಳಿಸೈ ರಾವಣ ರಾಜಗೆ || ೨೬೮ ||

**ಸುಗ್ರೀವನ ಉತ್ತರ**

ರಾವಣ ಎನ್ನಯ ಮಿತ್ರನು ಅಲ್ಲಾ
ಯಾವುದೆ ದಯಕೂ ಪಾತ್ರನು ಅಲ್ಲಾ
ಉಪಕಾರವಂತೂ ಮಾಡಿಯೆ ಇಲ್ಲಾ
ಪ್ರೀತಿಯು ಅಂತೂ ಇಲ್ಲವೆ ಇಲ್ಲಾ ॥ ೨೬೯ ॥

ರಾಮನ ವೈರಿಯು ನನಗೂ ವೈರಿಯು
ಕೊಲ್ಲುವೆ ಅವನನು ಮಕ್ಕಳ ಸಹಿತದಿ
ಮುತ್ತುವೆ ಲಂಕಾನಗರವ ಶೀಘ್ರದಿ
ಸುಡುತಲಿ ನಗರವ ಬೂದಿಯ ಮಾಡುವೆ ॥ ೨೭೦ ॥

ರಾಮನ ಹೊಡೆತಕೆ ತಡೆಯನು ರಾವಣ
ಎಲ್ಲೇ ಹೋದರು ಉಳಿಯನು ಆತನು
ರಾಮನ ಬಾಣಕೆ ಆಗುವ ಬಲಿಯು
ಜಟಾಯು ಮುದುಕನ ಕೊಂದುದು ಶೌರ್ಯವೆ ॥ ೨೭೧ ॥

ರಾಮನು ಲಕ್ಷ್ಮಣ ಇಲ್ಲದ ಸಮಯದಿ
ಸೀತೆಯ ಕದ್ದುದು ಹೇಡಿಯ ರೀತಿಯು
ತಿಳಿಸಲೊ ಆವನಿಗೆ ಬಂದಿದೆ ಕೊನೆಯು
ಆಗಲೆ ಅಂದನು ವಾಲಿಯ ಕುವರನು ॥ ೨೭೨ ॥

**ಅಂಗದನ ವಿಚಾರ**

ರಾಜನೆ ಈತನು ದೂತನೆ ಅಲ್ಲಾ
ಗಗನದಿ ನಿಲ್ಲುತ ಸೇನೆಯ ನೋಡುವ
ರೀತಿಯ ಕಂಡರೆ ಚಾರನು ಇರುವನು
ಬಂಧನ ಮಾಡಲು ಯೋಗ್ಯನು ಅಲ್ಲವೆ ॥ ೨೭೩ ॥

ಅಂತೆಯೆ ಆಯಿತು ಸುಗ್ರೀವನಾಜ್ಞೆ
ಹಿಡಿಯುತ ಅವನನು ಕಟ್ಟಿದರೆಲ್ಲರು
ಆದರು ರಾಮನು ಅಂದನು ಅವರಿಗೆ
ಹೋಗಲಿ ಚಾರನು ಇದ್ದರೂ ಬಿಡಿರಿ || ೨೭೪ ||

**ಶ್ರೀರಾಮನಿಂದ ಸಮುದ್ರರಾಜನಿಗೆ ಪ್ರಾರ್ಥನೆ**

ರಾಮನು ಮಲಗಿದ ದರ್ಭೆಯ ಹರಡಿಸಿ
ಕೈಗಳ ಮುಗಿಯುತ ಪೂರ್ವಕೆ ಅವನು
ಮಲಗಿದ ಕೈಗಳ ದಿಂಬನು ಮಾಡುತ
ಮನದಲಿ ನೆನೆಯುತ ಸಾಗರರಾಜನ || ೨೭೫ ||

ನಿಶ್ಚಯ ಮಾಡಿಹೆ ಸಾಗರ ದಾಡಲು
ಇಲ್ಲವೆ ಅಂದನು ಮಡಿಯುವೆ ಹೀಗೆಯೆ
ಒಂದೇ ಚಿತ್ತದಿ ಶರತಲ್ಪದಲಿಯೆ
ಕಳೆದನು ರಾಮನು ಮೂರು ರಾತ್ರಿಗಳ || ೨೭೬ ||

**ಶ್ರೀರಾಮನ ಕೋಪ**

ಬಂದಿತು ಕೋಪವು ರಾಮನಿಗಾಗಲೆ
ಕಣ್ಣುಗಳಾದವು ಕೆಂಡದ ಕಿಡಿಗಳು
ಲಕ್ಷ್ಮಣ ನೋಡೈ ಸಾಗರ ಸೊಕ್ಕನು
ಶಾಂತಿಯು ತಾಳ್ಮೆಯು ಒಳ್ಳೆಯ ಮಾತೂ || ೨೭೭ ||

ನೀತಿಯ ರೀತಿಯು ನಡೆಯವು ಇಲ್ಲಿ
ವಿಚಾರ ಹೀನರು ತಿಳಿಯುವರಿವುಗಳ
ಕೈಯಲಿ ಆಗದ ಹೇಡಿಯು ಲಕ್ಷ್ಮಣ
ಉದ್ಧತ ದಂಡದ ಪ್ರಯೋಗ ಮಾಡುವೆ || ೨೭೮ ||

ರಾಜಗೆ ಮಣಿಯುವ ಜಗವನು ಕಾಣುವೆ
ಸಾಮೋಪಾಯದಿ ಖ್ಯಾತಿಯು ಬಾರದು
ಹೆಸರೂ ದೊರಕದು ಜಯವೂ ಲಭಿಸದು
ಈಗಲೆ ನೋಡೈ ಎನ್ನಯ ಶಕ್ತಿಯ || ೨೭೯ ||

ಸಾಗರ ಒಣಗಿಸಿ ಜಲವನು ಶೋಷಿಸಿ
ಜಲಚರವೆಲ್ಲವ ಕೊಲ್ಲುವೆ ಈಗಲೆ
ವಾನರ ಸೇನೆಯು ನಡೆಯುತ ಹೋಗಲಿ
ಕೊಡು ನೀ ಬಿಲ್ಲನು ಬಾಣದ ಸಹಿತದಿ || ೨೮೦ ||

ಎನ್ನುತ ಬಿಟ್ಟನು ಉಗ್ರಾಸ್ತ್ರಗಳನು
ಉರಿಯುವ ಶರಗಳು ಜಲದಲಿ ನುಗ್ಗಲು
ಉಕ್ಕಿತು ಸಾಗರ ಭೀಕರ ರೂಪದಿ
ಚಿಮ್ಮಿದವೆಷ್ಟೋ ಜಲಚರ ಮೇಲಕೆ || ೨೮೧ ||

ಬಿರ್ರನೆ ಬೀಸಿತು ಬಿರುಸಿನ ಗಾಳಿಯು
ತೆರೆಗಳು ಎದ್ದವು ಚುಕ್ಕೆಯ ಕುಕ್ಕಲು
ಶಂಖಗಳೆಷ್ಟೋ ಹಾರುತ ಮೇಲಕೆ
ಬಿದ್ದವು ಗಗನದ ಚುಕ್ಕೆಗಳಂತೆಯೆ || ೨೮೨ ||

ಸಾಗರ ಕದಡಿತು ಬಾಣವು ಉರಿಯಿತು
ಹೊಗೆಯದು ಸುತ್ತಿತು ಕತ್ತಲೆಯಾಯಿತು
ರಾಮನ ರೋಷವು ಏರುತಲಿದ್ದಿತು
ಲಕ್ಷ್ಮಣ ಬರುತಲಿ ತಡೆದನು ಅಣ್ಣನ || ೨೮೩ ||

**ಲಕ್ಷ್ಮಣನಿಂದ ತಡೆ**

ಅಣ್ಣನೆ ಕೋಪವು ಸಲ್ಲದು ಈ ಪರಿ
ಜ್ಞಾನಿಯು ಇರುತಿಹೆ ಕೋಪವು ಏತಕೆ
ಶಾಂತನು ಆಗುತ ಚಿಂತಿಸು ಮನದಲಿ
ರಾಮನು ಅಂದನು ಸಮುದ್ರರಾಜಗೆ || ೨೮೪ ||

ಒಣಗಿಸಿ ಬಿಡುವೆನು ಈಗಲೆ ನಿನ್ನನು
ಬುದ್ಧಿಯು ಹೋಯಿತೆ ವಿಚಾರ ಮಾಡಲು
ಆಗಲಿ ಸೊಕ್ಕನು ಮುರಿಯುವೆ ಈಗಲೆ
ಎನ್ನುತ ತೆಗೆದನು ಬಾಣವ ಹೊರಗೆ || ೨೮೫ ||

ಮಂತ್ರಿಸಿ ಅದಕೇ ಬ್ರಹ್ಮಾಸ್ತ್ರವನ್ನು
ಹೂಡುತ ಬಿಲ್ಲಿಗೆ ಎಳೆದನು ತಂತಿಯು
ಆಗಲೆ ಸಾಗರರಾಜನು ಎದ್ದನು
ನೀರಿನ ಮಧ್ಯದಿ ಸತಿಯಳ ಸಹಿತದಿ || ೨೮೬ ||

**ಸಮುದ್ರರಾಜನ ಬೇಡಿಕೆ**

ರಾಮನ ಹತ್ತಿರ ಬರುತಲಿ ಆತನು
ಕೈಗಳ ಜೋಡಿಸಿ ಅಂದನು ರಾಮಗೆ
ರಾಘವ ಈಗಲೆ ಶಾಂತನು ಆಗು
ಜಗದಲಿ ಇರುವವು ಪಂಚಭೂತಗಳು || ೨೮೭ ||

ನೆಲ ಜಲ ಅಗ್ನಿಯು ವಾಯು ಆಕಾಶ
ಶಾಶ್ವತ ಸ್ವಭಾವ ಇರುವವು ಅವಕೆ
ಅಂತೆಯೆ ಜಲವಿಹ ನಾನೂ ಅಸಾಧ್ಯ
ಇರುವೆನು ಕೂಡಾ ಅಗಾಧ ರೂಪದಿ || ೨೮೮ ||

ಅಗಾಧರೂಪವೆ ಎನ್ನಯ ರೂಪವು
ಬಿಡುವದು ಆಗದು ಎಂದಿಗು ನನಗೆ
ಆದರೆ ಸಹಾಯ ಮಾಡಲು ನಿನಗೆ
ಸಾಧ್ಯವು ಇರುವದು ಹೇಳುವೆ ಕೇಳ್ಳೈ || ೨೮೯ ||

ಸಾಗರ ಜಂತುವು ಯಾವುದು ನಿನ್ನಯ
ಕಪಿಗಳ ತಂಟೆಗೆ ಬಾರದೆ ಇರುವವು
ಸೇತುವೆ ಕಟ್ಟುವದಾದರೆ ನಾನು
ತೇಲಿಸಿ ನಿಲ್ಲಿಸಿ ಭಾರವ ಹೊರುವೆನು || ೨೯೦ ||

ರಾಮನು ನುಡಿದನು ಸಾಗರರಾಜನೆ
ಹೂಡಿಹೆ ಆಗಲೆ ಬ್ರಹ್ಮಾಸ್ತ್ರವನು
ವಿಫಲವು ಆಗದು ಹೂಡಿದ ಅಸ್ತ್ರವು
ಗುರಿಯನು ತೋರಿಸು ಬಿಡುವೆನು ಇದನು || ೨೯೧ ||

ರಾಘವ ಇಲ್ಲಿಯೆ ಉತ್ತರ ದಿಕ್ಕಿಗೆ
ಪ್ರದೇಶವಿರುವದು ದ್ರುಮಕುಲ್ಯವೆಂಬ
ಪುಣ್ಯದ ದೇಶವು ಇದ್ದರು ಕೂಡಾ
ವಿಕಟಾಕೃತಿಗಳು ಉಗ್ರಕರ್ಮಿಗಳು || ೨೯೨ ||

ದಸ್ಯುಗಳಿರುವರು ಪಾಪಾಚರಣದಿ
ಬಾಣವ ಬಿಡುತಲಿ ತೊಲಗಿಸು ಅವರನು
ರಾಮನು ಬಿಟ್ಟನು ಉರಿಯುವ ಬಾಣವ
ಪ್ರದೇಶವೆಲ್ಲವು ಸುಡುತಲಿ ಆಯಿತು || ೨೯೩ ||

ಉಸುಕಿನ ಭೂಮಿಯು ಬಿರಿಯಿತು ನೆಲವೂ
ಬಿರುಕಿನ ಒಳಗಡೆ ಚಿಮ್ಮಿತು ಜಲವೂ
ನೋಡುತ ಈ ಪರಿ ಸಾಗರ ರಾಜನು
ಅಂದನು ರಾಮನೆ ಇರುವನು ಒಬ್ಬನು || ೨೯೪ ||

ನಿನ್ನಯ ಸೇನೆಯ ವೀರನು ಆತನು
ವಿಶ್ವಕರ್ಮಸುತ ನಳನಾಮಾಂಕಿತ
ವರವನು ಪಡೆದಿಹ ತಂದೆಯ ಕಡೆಯಿಂ
ಶಿಲ್ಪವಿದ್ಯೆಯಲಿ ತಂದೆಗೆ ಸರಿಸಮ || ೨೯೫ ||

ಆಗಲೆ ಎದ್ದನು ನಳವರ ಸೈನ್ಯದಿ
ಬರುತಲಿ ಮುಂದಕೆ ಮಣಿದನು ರಾಮಗೆ
ನಿಜವಿದು ಇರುವೆನು ವಿಶ್ವಕರ್ಮಸುತ
ನೆನಪಿಗೆ ಬರುತಿದೆ ಎಲ್ಲವು ಈಗಲೆ || ೨೯೬ ||

**ಸೇತುಬಂಧನ**

ಹಿಂದಕೆ ಮಂದರ ಪರ್ವತದಲ್ಲಿಯೆ
ತಂದೆಯು ಕೊಟ್ಟಿಹ ತಾಯಿಗೆ ವರವನು
ತನ್ನಯ ಶಕ್ತಿಯು ನನ್ನಲಿ ಬರಲಿಕೆ
ಇರುವೆನು ಅವನಿಗೆ ಔರಸಪುತ್ರನು || ೨೯೭ ||

ಸಾಗರ ಮೇಲಕೆ ಸೇತುವೆ ಕಟ್ಟಲು
ಬಲ್ಲೆನು ನಿಜಕೂ ಎನ್ನಲು ಕಪಿಗಳು
ತಂದರು ಬಂಡೆಗಳಲ್ಲದೆ ಗಿಡಗಳ
ಬೆಟ್ಟದ ಶಿಖರವ ತಂದರು ಕೆಲವರು || ೨೯೮ ||

ತುಂಬುತ ನಡೆದರು ಸಾಗರ ತಳವನು
ಅಗಲದಿ ಇದ್ದಿತು ಹತ್ತು ಯೋಜನವು
ಉದ್ದಕೆ ಇದ್ದಿತು ನೂರು ಯೋಜನವು
ಮುಗಿಯಿತು ಸೇತುವೆ ಐದು ದಿನಗಳಲಿ || ೨೯೯ ||

ಸೇತುವೆ ತಟ್ಟಿತು ಲಂಕೆಯ ದಡದಲಿ
ಸುವೇಲ ಪರ್ವತ ಬುಡವನು ಮುಟ್ಟಿತು
ಕಂಡಿತು ಸೇತುವೆ ಸಾಗರ ತಲೆಯಲಿ
ಬೈತಲೆಯಂತೆಯೆ ನೆಟ್ಟಗೆ ಹೋದುದು || ೩೦೦ ||

ವಿಭೀಷಣನಾಗ ಗದೆಯನು ಹಿಡಿಯುತ
ನಿಂತನು ಸೇತುವೆ ದಕ್ಷಿಣ ತುದಿಗೆ
ರಕ್ಕಸರಿಂದಲಿ ಸೇತುವೆ ರಕ್ಷಣೆ
ಮಾಡಲು ನಿಂತನು ಒಬ್ಬನೆ ಅಲ್ಲಿಯೆ || ೩೦೧ ||

ಹೊರಟಿತು ವಾನರ ಸೈನ್ಯವು ಭರದಲಿ
ಕೆಲವರು ಹೊರಟರು ಈಜುತ ನೀರಲಿ
ಕೆಲವರು ಹಾರುತ ಗಗನದಿ ಮೇಲಕೆ
ವಾನರಸಾಗರ ತಲುಪಿತು ಲಂಕೆಯ || ೩೦೨ ||

ಸೇನೆಯ ಸಿದ್ಧತೆ

ಲಕ್ಷ್ಮಣ ಈಗಲೆ ನಿಲ್ಲಿಸು ಸೇನೆಯ
ವ್ಯೂಹಾಕಾರದಿ ಸಿದ್ಧತೆಯಲ್ಲಿಯೆ
ಹೊರಡುವೆ ನಾನೇ ಎದುರಿಗೆ ಮುಂದೆಯೆ
ವಿಭಜಿಸು ಸೇನೆಯ ಘಟಕಗಳ ಮಾಡು || ೩೦೩ ||

ಅಂಗದ ನೀಲರು ಮುಂದೆಯೆ ನಿಲ್ಲಲಿ
ಋಷಭನು ದಕ್ಷಿಣ ಭಾಗದಿ ಇರಲಿ
ಎಡದಲಿ ಬರುವನು ಗಂಧಮಾದನನು
ಜಾಂಬವ ಸುಷೇಣ ವೇಗದರ್ಶಿಯೂ || ೩೦೪ ||

ವ್ಯೂಹದ ಮಧ್ಯದ ಭಾಗದಿ ಇರಲಿ
ಸೇನೆಯ ರಕ್ಷಣೆ ಭಾರವ ಹೊರುತಲಿ
ಸುಗ್ರೀವನಿರಲಿ ಸೇನೆಯ ಹಿಂದೆಡೆ
ಹಿಂದಿನ ಭಾಗದ ರಕ್ಷಣೆ ನೋಡಲಿ || ೩೦೫ |

ನಂತರ ರಾಮನು ಅಂದನು ಕೇಳೈ
ಸುಗ್ರೀವ ವರನೇ ಆಯಿತು ವ್ಯೂಹವು
ನಿಮ್ಮಯ ಕೈಯಲಿ ಸಿಕ್ಕಿಹ ಶುಕನನು
ಈಗಲೆ ಬಿಡು ನೀ ಹೋಗಲಿ ಆತನು || ೩೦೬ |

ಶುಕನು ರಾಮನ ಸೇನೆಯ ವಿಷಯವನ್ನು ರಾವಣನಿಗೆ ಹೇಳಿದುದು

ಹೋಗುತ ಆತನು ರಾವಣನೆದುರಿಗೆ
ಹೇಳಿದ ತನ್ನಯ ಪರಿಯನು ಎಲ್ಲವ
ರಾಮನ ಸೇನೆಯು ಸಾಗರ ದಾಟಿದೆ
ಯುದ್ಧಕೆ ವ್ಯೂಹದ ಸಿದ್ಧತೆಯಲ್ಲಿದೆ || ೩೦೭ ||

ಸೀತೆಯ ಒಪ್ಪಿಸಿ ಯುದ್ಧವ ತಪ್ಪಿಸು
ಇಲ್ಲವೆ ಯುದ್ಧದಿ ಅವರನು ಶಿಕ್ಷಿಸು
ಸುಮ್ಮನೆ ಕೂಡುವ ಕಾಲವು ಮೀರಿದೆ
ಕೇಳುತ ಈ ನುಡಿ ಗುಡುಗಿದ ರಾವಣ || ೩೦೮ |

ದೇವದಾನವರು ಗಂಧರ್ವ ಬರಲಿ
ಯಾರೇ ಬಂದರು ಸೀತೆಯ ಒಪ್ಪಿಸೆ
ಮಾನವ ರಾಮನ ಅಂಜಿಕೆ ಏತಕೆ
ಮಾಡುವೆನವನನು ಧೂಳಿಯ ಪಟವನು || ೩೦೯ ||

**ರಾಮನ ಸೇನೆಯ ಬಲಾಬಲ ತಿಳಿಯಲು ಶುಕಸಾರಣರು**

ನಂತರ ಕರೆದನು ಶುಕಸಾರಣರನು
ಸಚಿವರು ಇಬ್ಬರು ಧೂರ್ತರು ನಿಜಕೂ
ಕೇಳಿರಿ ಸಚಿವರೆ ರಾಮನ ಸೇನೆಯು
ಸೇತುವೆ ಕಟ್ಟುತ ಬಂದಿದೆಯಂತೆ || ೩೧೦ ||

ನಿಜಕೂ ಅದ್ಭುತ ಕೆಲಸವೇ ಇದುವೆ
ಶಕ್ಯತೆ ಈ ಪು ನಂಬಿರಲಿಲ್ಲಾ
ವಾನರ ಸೇನೆಯ ಸಂಖ್ಯೆಯು ಎಷ್ಟಿದೆ
ಬಲವದು ಎಷ್ಟಿದೆ ನಾಯಕರಾರು || ೩೧೧ ||

ಎಲ್ಲವ ತಿಳಿಯುತ ತಿಳಿಸಿರಿ ಎಲ್ಲವ
ರಾಮ ಸುಗ್ರೀವ ಮೆಚ್ಚಿದ ಸಚಿವರು
ಯಾರಿಹರೆಂಬುದ ತಿಳಿಯಿರಿ ಮೊದಲು
ಯುದ್ಧದಿ ನುಗ್ಗುವ ಧೀರರು ಯಾರು || ೩೧೨ ||

ಸೇತುವೆ ಕಟ್ಟಿದ ರೀತಿಯ ತಿಳಿಯಿರಿ
ಸೇನೆಯ ಸಿದ್ಧತೆಯೆಲ್ಲವ ಅರಿಯಿರಿ
ಲಕ್ಷ್ಮಣ ರಾಮರ ಶಕ್ತಿಯ ಅಸ್ತ್ರವ
ಎಲ್ಲವ ಅರಿಯುತ ವಿವರಿಸಿರೆನಗೆ || ೩೧೩ ||

ವಾನರ ಸೈನ್ಯಕೆ ಅಧಿಪತಿ ಯಾರು
ಹೇಳಿದ ವಿವರವ ಎಲ್ಲವ ತಿಳಿಯುತ
ಕೂಡಲೆ ಬನ್ನಿರಿ ಸಮಯವ ಕಳೆಯದೆ
ಎನ್ನಲು ಇಬ್ಬರು ಹೊರಟರು ಆಗಲೆ || ೩೧೪ ||

**ಕಪಿವೇಷದಲ್ಲಿ ಶುಕಸಾರಣರು**

ಧರಿಸುತ ಕಪಿಗಳ ವೇಷವ ಅವರು
ಹೊಕ್ಕರು ವಾನರ ಸೇನೆಯ ಮಧ್ಯದಿ
ಅಸಂಖ್ಯ ಕಪಿಗಳ ಸೇನೆಯ ನೋಡುತ
ಲೆಕ್ಕವ ಮಾಡಲು ಆಗದು ಅವರಿಗೆ || ೩೧೫ ||

ವಾನರ ಸೇನೆಯು ಬಂದಿದೆ ಎಷ್ಟೋ
ತುಂಬಿವೆ ಗಿರಿವನ ಕೊಳ್ಳಗಳೆಲ್ಲಾ
ಸಾಗರ ದಾಟಿದ ಸೇನೆಯು ಎಷ್ಟೋ
ದಾಟುತ ಸೇತುವೆಯಲ್ಲಿಯೆ ಎಷ್ಟೋ || ೩೧೬ ||

**ವಿಭೀಷಣನು ಶುಕಸಾರಣರನ್ನು ಹಿಡಿದುದು**

ಸರದಿಗೆ ಕಾದಿಹ ಸಾಗರದಾಚೆಗೆ
ಸೇನೆಯ ಊಹೆಯು ನಿಲುಕದು ಇವರಿಗೆ
ವಿಭೀಷಣನಾಗ ನೋಡಿದ ಇವರನು
ಮಾಯಾ ಕಪಿಗಳು ಬಂಧಿಸಿ ಎಂದನು || ೩೧೭ ||

ಒಯ್ದನು ಅವರನು ರಾಮನ ಎದುರಿಗೆ
ನೋಡೈ ರಾಮನೆ ಲಂಕೆಯ ಸಚಿವರು
ಶುಕನೂ ಸಾರಣ ಎಂಬುವ ಇಬ್ಬರು
ಬಂದಿಹರಿಲ್ಲಿಗೆ ಗುಟ್ಟನು ಅರಿಯಲು || ೩೧೮ ||

ರಾಮನು ನಗುತಲಿ ನೋಡಿದ ಅವರನು
ಇಬ್ಬರು ಅಂದರು ನಡುಗುತ ಆಗಲೆ
ರಾಜನ ಆಜ್ಞೆಯು ಪಾಲನೆಗಾಗಿಯೆ
ಬಂದೆವು ಇಲ್ಲಿಗೆ ಬಲವನು ತಿಳಿಯಲು ॥ ೩೧೯ ॥

### ಶುಕಸಾರಣರಿಗೆ ಶ್ರೀರಾಮನು ಹೇಳಿದುದು

ರಾಮನು ಅಂದನು ಒಳ್ಳೆಯ ಕೆಲಸವು
ನೋಡುವದಾಯಿತೆ ಸೇನೆಯು ಎಲ್ಲವ
ನೋಡಿದಿರಾದರೆ ಹೋಗಲೂ ಬಹುದು
ಇಲ್ಲದೆ ಹೋದರೆ ನೋಡಿರಿ ಇನ್ನೂ ॥ ೩೨೦ ॥

ವಿಭೀಷಣ ದೊರೆಯು ತೋರುವ ಎಲ್ಲವ
ಜೀವದ ಹೆದರಿಕೆ ತೊರೆಯಿರಿ ನಿಜಕೂ
ಆಯುಧ ಹೀನರ ದೂತರ ಎಂದೂ
ಕೊಲ್ಲೆನು ತಿಳಿದಿರಿ ಯುಕ್ತವು ಅಲ್ಲಾ ॥ ೩೨೧ ॥

ಹೇಳಿರಿ ನಿಮ್ಮಯ ರಾವಣ ರಾಜಗೆ
ಶಕ್ತಿಯು ಸೊಕ್ಕಿನ ಮದದಲಿ ಯಾವನು
ಸೀತೆಯ ಕದಿಯುತ ತಂದಿಹ ಅವನಿಗೆ
ತೋರಿಸ ಹೇಳಿರಿ ತನ್ನಯ ಶಕ್ತಿಯ ॥ ೩೨೨ ॥

ತನ್ನಯ ಬಂಧುಗಳೆಲ್ಲರ ತರಲಿ
ಯುದ್ಧದಿ ನೋಡಲಿ ಎನ್ನಯ ಬಲವನು
ನಾಳಿನ ಬೆಳಗಿನ ಸಮಯದಿ ಮುತ್ತುವೆ
ಲಂಕೆಯ ಕೋಟೆಯ ಒಡೆಯುವೆ ನಾಳೆಗೆ ॥ ೩೨೩ ॥

ಬಂದಿಹರಿಬ್ಬರು ಹೇಳುವರೀಪರಿ
ಯುದ್ಧದಿ ಎನ್ನನು ಗೆಲ್ಲುವರಾರದು
ನಿಮ್ಮಯ ಮಾತಿಗೆ ಒಪ್ಪಿಗೆ ಇಲ್ಲವು
ನೋಡುವೆ ನಾನೇ ಸೇನೆಯ ಎನ್ನುತ || ೩೩೪ ||

ಹತ್ತಿದ ಉನ್ನತ ಸೌಧದ ಮೇಲಕೆ
ಜೊತೆಗೇ ಹೊರಟರು ಶುಕಸಾರಣರೂ
ಕಂಡನು ರಾವಣ ಕಪಿಗಳ ಸೇನೆಯ
ತುಂಬಿದೆ ಎಲ್ಲೆಡೆ ಲಂಕೆಯ ಹೊರಗಡೆ || ೩೩೫ ||

ಸಾರಣ ಹೇಳೈ ಈಗಲೆ ನೀನು
ವಾನರ ಸೇನೆಯ ಶೂರರು ಯಾರು
ಸುಗ್ರೀವ ಧೀರರ ತೋರಿಸು ಅವರಲಿ
ವಾನರ ರಾಜಗೆ ಸಲಹೆಯ ಯಾರದು || ೩೩೬ ||

ಸಾರಣನು ರಾವಣನಿಗೆ ವಾನರ ವೀರರನ್ನು ತೋರಿಸುವದು

ಸೈನ್ಯದ ಭಾಗದ ಅಧಿಪತಿಗಳಾರು
ತಿಳಿದುದು ಎಲ್ಲವ ವಿವರದಿ ಹೇಳು
ಸಾರಣನೆಂದನು ನೋಡೈ ರಾಜನೆ
ಅಲ್ಲಿಯೆ ಕಾಣುವ ಗರ್ಜನೆ ಮಾಡುವ || ೩೩೭ ||

ಲಂಕೆಯ ನೋಡುವ ಸೇನೆಯ ಅಧಿಪತಿ
ಹೆಸರಿದೆ ಅವನಿಗೆ ನೀಲನು ಎನ್ನುತ
ಆ ಕಡೆ ನಿಂತಿಹ ಬಾಲವ ಎತ್ತಿಹ
ಕೈಗಳ ಎತ್ತುತ ಗರ್ಜನೆ ಮಾಡುವ || ೩೩೮ ||

ಉನ್ನತ ಕಾಯನು ಸುವರ್ಣ ವರ್ಣನು
ಇವನೇ ಇರುವನು ವಾಲಿಯು ಕುವರನು
ಹೆಸರಿದೆ ಅವನಿಗೆ ಅಂಗದನೆನ್ನುತ
ಕಿಷ್ಕಿಂಧೆಗವನೆ ಯುವರಾಜನೀಗ || ೩೩೯ ||

ಹಿಂದಕೆ ಹನುಮನು ಬಂದುದು ನೆನಪಿದೆ
ಅವನನು ಕಳಿಸಲು ಇವನೇ ಕಾರಣ
ವಾಲಿಯ ಕುವರನು ತಂದೆಗೆ ಸಮಬಲ
ಬಂಧುರ ದೇಹಿಯು ಅತಿಬಲ ವೀರನು || ೩೪೦ ||

ಆ ಕಡೆ ಕಾಣುವ ವೀರನು ನಳನು
ಅವನೇ ಸೇತುವೆ ಕಟ್ಟಿದ ಶಿಲ್ಪಿಯು
ಸುತ್ತಲು ಕಾಣುವ ಭೀಕರ ಕಪಿಗಳು
ಉಗ್ರರು ಅಲ್ಲದೆ ಚಂಡಪರಾಕ್ರಮಿ || ೩೪೧ ||

ಮುಂದಕೆ ಕಾಣುವ ವೀರನು ಒಬ್ಬನು
ವರ್ಣವು ಇರುವದು ಬೆಳ್ಳಿಯ ತೆರದಲಿ
ಹೆಸರಿದೆ ಅವನಿಗೆ ಶ್ವೇತನು ಎಂದು
ಚಪಲ ಸ್ವಭಾವದ ಭೀಮಪರಾಕ್ರಮಿ || ೩೪೨ ||

ನಂತರ ಕಾಣುವ ವೀರನು ಕುಮುದನು
ಗೋಮತಿ ತೀರದ ಪರ್ವತ ರಾಜ್ಯವ
ಆಳುತ ಬಂದಿಹ ಸೈನ್ಯದ ಸಹಿತದಿ
ಅನೇಕ ಬಣ್ಣದ ಕೂದಲು ಇರುವವು || ೩೪೩ ||

ಘೋರಕೃತ್ಯವ ಮಾಡುವ ಅವನಲಿ
ದೈನ್ಯದ ಮಾತೇ ಕಾಣದು ತಿಳಿ ನೀ
ನಂತರ ಕಾಣುವ ವಾನರವೀರನು
ದೀರ್ಘಕೇಸರನು ಕಪಿಲವರ್ಣನೂ || ೩೪೪ ||

ಆಗಿಹ ಆತನೆ ರಂಭನು ಎಂಬರು
ಹಾಗೆಯೆ ಮುಂದಕೆ ಕಾಣುವ ಕಪಿವರ
ಶರಭನು ಎನ್ನುವ ಶೂರನು ಇರುವನು
ತಂದಿಹರಿಬ್ಬರು ತಮ್ಮಯ ಸೈನ್ಯವ || ೩೪೫ ||

ನಂತರ ಕಾಣುವ ವೀರನು ಪನಸನು
ಯುದ್ಧದಿ ಪರಿಣತ ಸಂಗ್ರಾಮಸಿಂಹ
ಈ ಕಡೆ ಕಾಣುವ ವೀರನು ವಿನತನು
ಕೊಬ್ಬಿದ ಶೂರನು ಹೆದರನು ಯಾರಿಗು || ೩೪೬ ||

ಕೊನೆಯಲಿ ಕಾಣುವ ಗವಯನು ನೋಡಿರಿ
ಎಲ್ಲರು ಇರುವರು ಕಾಮರೂಪಿಗಳು
ಕೋಟಿಯ ಕೋಟಿಯ ಸೇನೆಯ ಪಡೆಗಳ
ಒಡೆಯರು ಅಲ್ಲದೆ ಯುದ್ಧದಿ ಕುಶಲರು || ೩೪೭ ||

ರಾಜನೆ ನೋಡೈ ಹಾಗೆಯೆ ಮುಂದಕೆ
ಬಣ್ಣಬಣ್ಣದಲಿ ಕಾಣುವ ಕೂದಲ
ಬಿಸಿಲಲಿ ಕಾಣುವನಾತನು ಎಮಗೆ
ಕಾಮನ ಬಿಲ್ಲಿನ ಹೊಳಪಿನ ತೆರದಲಿ || ೩೪೮ ||

ಕರೆವರು ಆವನನು ಹರನು ಎನ್ನುತ
ನಂತರ ಕಾಣುವ ಭಲ್ಲೂಕವರರು
ನೀಲಾಂಜನಗಿರಿ ವಾಸಿಗಳಿರುವರು
ಯುದ್ಧದಿ ಯಮದೂತರೇ ಇರುವರು || ೩೪೯ ||

ಬಂದಿಹರಿಲ್ಲಿಗೆ ಸಂಖ್ಯೆಯ ಮೀರಿಸಿ
ಅವರಲಿ ಕಾಣುವ ವೀರನು ಧೂಮ್ರನು
ಅವನೇ ಇರುವನು ಭಲ್ಲೂಕರಾಜ
ಅವನ ತಮ್ಮನೂ ಅಸಮಾನ ಶೂರ || ೩೫೦ ||

ಆವನೇ ಇರುವನು ಜಾಂಬುವಂತನು
ಅವನೇ ಅವರಿಗೆ ಸೇನೆಯ ಅಧಿಪತಿ
ಅತಿಶಯ ಸಾಹಸಿ ಸೋಲನು ಅರಿಯನು
ದೇವದಾನವರ ಯುದ್ಧದಿ ಆತನು || ೩೫೧ ||

ಇಂದ್ರಗೆ ಸಹಾಯ ಮಾಡಿದ ವೀರನು
ಇಂದ್ರನ ಕಡೆಯಿಂ ವರಗಳ ಪಡೆದಿಹ
ಪರ್ವತ ಶಿಖರವ ಕಿತ್ತುತ ಎಸೆಯುವ
ಧೀರರ ಪಡೆಯನು ಹೊಂದಿಹ ಈತನು || ೩೫೨ ||

ರಾಕ್ಷಸ ಪಿಶಾಚಿ ಮೀರಿದ ವೀರರು
ಇರುವವು ಈತನ ಕರಡಿಯ ಪಡೆಗಳು
ಆಕಡೆ ಮೇಲಕೆ ಜಿಗಿಯುವ ವಾನರ
ಹೆಸರಿದೆ ಅವನಿಗೆ ದಂಭನು ಎನ್ನುತ || ೩೫೩ ||

ಅವನೂ ಇಂದ್ರಗೆ ನೆರವನು ಈಯುವ
ಬದಿಯಲಿ ಕಾಣುವ ಸನ್ನಾದ ವೀರ
ಒಂದೇ ಹೆಜ್ಜೆಗೆ ಯೋಜನ ಕ್ರಮಿಸುವ
ನಿಂತರೆ ಮೇಲಕೆ ಯೋಜನ ಏರುವ || ೩೫೪ ||

ಇವನೂ ಇಂದಿಗು ಸೋಲನು ಅರಿಯನು
ಆಕಡೆ ಇರುತಿಹ ವಾನರ ಗೊತ್ತೇ
ನಿನ್ನಯ ಅಣ್ಣನ ವನದಲಿ ಇರುತಿಹ
ಕ್ರಥನನು ಎನ್ನುತ ಕರೆವರು ಅವನನು || ೩೫೫ ||

ಈಕಡೆ ಕಾಣುವ ಅತಿಬಲ ವೀರನು
ಪ್ರಮಾಥಿಯೆಂಬುವ ಸೈನ್ಯಕೆ ಪತಿಯಿಹ
ಉಶೀರ ಬೀಜವು ಎನ್ನುವ ಗಿರಿಯಲಿ
ಅಧಿಪತಿ ಇರುವನು ತನ್ನಯ ಜನರಿಗೆ || ೩೫೬ ||

ಕಪ್ಪಿನ ಮೋರೆಯ ಸಿಂಗಳೀಕಗಳು
ನಿಂತಿವೆ ನೋಡೈ ಅತ್ತಲು ದೂರಕೆ
ಅವುಗಳ ಅಧಿಪತಿ ಬಲಯುತ ಗವಾಕ್ಷ
ಮೇರು ಪರ್ವತದ ಶಿಖರದಿ ಇರುತಿಹ || ೩೫೭ ||

ವಾನರ ವೀರನು ಕೇಸರಿ ಅಲ್ಲಿಹ
ಚಿನ್ನದ ವರ್ಣದ ಗಿರಿಯಲಿ ಇರುತಿಹ
ಚಿನ್ನದ ವರ್ಣದ ವಾನರವೀರರ
ಪಡೆಯನು ಪಡೆದಿಹ ಅತಿಶಯ ಶೂರನು || ೩೫೮ ||

ಮುಂಡಕ್ಕೆ ಕಾಣುವ ವೀರನು ಶತಬಲಿ
ಸಾರಣ ಹೇಳುವ ವಿಷಯವ ಕೇಳುತ
ರಾವಣ ನೋಡುತಲಿದ್ದನು ಸೇನೆಯ
ನಂತರ ಶುಕನೂ ಅಂದನು ರಾಜನೆ || ೩೫೯ ||

ಕಪಿವರರೆಲ್ಲರು ವಾನರ ರಾಜನ
ಬಂಧುಗಳೆಂದೂ ತಿಳಿದಿರು ನೀನು
ದೇವಗಂಧರ್ವ ಅಂಶಜರೆಲ್ಲರು
ಅಲ್ಲದೆ ಇರುವರು ಕಾಮರೂಪಿಗಳು || ೩೬೦ ||

ಆಕಡೆ ನೋಡಿರಿ ಇಬ್ಬರು ತರುಣರು
ಮೈಂದ ದ್ವಿವಿದರು ಅಜೇಯ ವೀರರು
ಬ್ರಹ್ಮನ ಕರುಣೆಯ ಫಲದಿಂ ಅವರು
ಅಮೃತ ಕುಡಿದಿಹ ಅಮರರು ಇರುವರು || ೩೬೧ ||

ಹನುಮಂತನನ್ನು ತೋರಿಸಿ ವರ್ಣಿಸುವದು

ಆಕಡೆ ಕಾಣುವ ಕೊಬ್ಬಿದ ವೀರನು
ಮದಿಸಿದ ಆನೆಯ ತೆರದಲಿ ಕಾಣುವ
ಕ್ರುದ್ಧನು ಆದರೆ ಕಡಲನೆ ಕಲಕುವ
ಲಂಕೆಯ ಸುಟ್ಟಿಹ ಹನುಮನೆ ಆತನು || ೩೬೨ ||

ಸಾಗರ ದಾಟಿದ ಜಿಗಿಯುತ ಈತನು
ಕಾಮರೂಪಿಯೂ ಅತಿಬಲಯುತನೂ
ಈತನ ವೇಗಕೆ ತಡೆಯೇ ಇಲ್ಲವು
ಹುಟ್ಟಿದ ಸಮಯದಿ ಸೂರ್ಯನ ಕಾಣುತ || ೩೬೩ ||

ಹಿಡಿಯಲು ಹೋಗಿಹ ಸಾಹಸಿ ಈತನು
ಈತನ ಶಕ್ತಿಗೆ ಮಿತಿಯೇ ಇಲ್ಲವು
ಬದಿಯಲಿ ನಿಂತಿಹ ಶಾಮಲ ವರ್ಣದ
ಸುಂದರ ವದನದ ಬಂಧುರ ದೇಹಿಯು || ೩೬೪ ||

ರಾಮನು ಇರುವನು ಇಕ್ಷ್ವಾಕು ಕುವರ
ಅತಿರಥ ಧಾರ್ಮಿಕ ವೇದಜ್ಞಾನಿಯು
ಯುದ್ಧದಿ ಅವನನು ಗೆಲ್ಲಲು ಆಗದು
ಬಾಣದ ತುದಿಯಲಿ ಮೃತ್ಯುವೆ ಇರುವದು || ೩೬೫ ||

ಈತನ ಸತಿಯೇ ಸೀತೆಯು ಇರುವಳು
ಅವನಿಗೆ ಬದಿಯಲಿ ಕಾಣುವ ತರುಣನು
ಚಿನ್ನದ ಬಣ್ಣದ ಲಕ್ಷ್ಮಣನಿರುವನು
ರಾಜನೀತಿಯಲಿ ಯುದ್ಧವಿದ್ಯೆಯಲಿ || ೩೬೬ ||

ಯಾರೂ ಇಲ್ಲವು ಅವನಿಗೆ ಸರಿಸವು
ರಾಮನ ತಮ್ಮನು ಪ್ರಾಣವೆ ಅವನಿಗೆ
ಅತಿಶಯ ಕೋಪಿಯು ಅಜೇಯ ವೀರನು
ರಾಮನ ಈಚೆಗೆ ನಿಂತಿಹ ವೀರನು || ೩೬೭ ||

ನಿನ್ನಯ ತಮ್ಮನು ವಿಭೀಷಣ ನೋಡು
ಅವನಿಗೆ ಕಟ್ಟಿಹ ರಾಮನು ಪಟ್ಟವ
ಲಂಕೆಗೆ ಅಧಿಪತಿ ಎನ್ನುತ ಸಾರಿದ
ಇಬ್ಬರ ನಡುವೆಯೆ ನಿಂತಿಹ ಶೂರನು || ೩೬೮ ||

ವಾನರರಾಜನು ಸುಗ್ರೀವನಿಹನು
ವಿವೇಕಯುತನೂ ಶಕ್ತಿಶಾಲಿಯೂ
ಇರುತಿಹ ಇವನಿಗೆ ಸರಿಸಮರಿಲ್ಲವು
ಹೃದಯದಿ ಮೆರೆಯುವ ಕಾಂಚನಮಾಲೆಯು ॥ ೩೭೯ ॥

ಬಂದಿದೆ ಅವನಿಗೆ ವಾಲಿಯ ನಂತರ
ಆದರಲಿ ನೆಲೆಸಿಹಳಿನ್ನುವರೆಲ್ಲರು
ಸೌಭಾಗ್ಯಲಕ್ಷ್ಮಿ ಯಶೋಲಕ್ಷ್ಮಿಯೂ
ಹೀಗಿದೆ ನಿನ್ನಯ ವೈರಿಯ ಸೇನೆಯು ॥ ೩೭೦ ॥

ರಾವಣನ ಪ್ರತಿಕ್ರಿಯೆ

ಕೇಳುತ ರಾವಣ ನೋಡುತಲಿದ್ದನು
ಮನದಲಿ ಉಕ್ಕಿತು ಕಳವಳ ಹಾಗೆಯೆ
ಕಳವಳ ಧರಿಸಿತು ಕೋಪದ ರೂಪವ
ಗದರಿದ ರಾವಣ ಶುಕಸಾರಣರನು ॥ ೩೭೧ ॥

ಎಮ್ಮಯ ಆಶ್ರಯ ಹೊಂದಿದ ಸಚಿವರೆ
ಎನ್ನಯ ಎದುರಿಗೆ ನುಡಿಯುವ ಪರಿಯೇ
ರಕ್ಷೆಯ ಶಿಕ್ಷೆಯ ಕೊಡುತಿಹ ಪ್ರಭುವಿಗೆ
ವೈರಿಯ ಹೊಗಳಿಕೆ ಮಾಡುವ ಮೂರ್ಖರೆ ॥ ೩೭೨ ॥

ಯುದ್ಧದ ಸಮಯದಿ ವೈರಿಯ ಹೊಗಳಿಕೆ
ಭೃತ್ಯನ ನೀತಿಯ ತಿಳಿಯಿರಿ ಇಬ್ಬರು
ಅರ್ಥವ ತಿಳಿಯದೆ ಓದಿದರೇನದು
ಇಂತಹ ಮಾತಿಗೆ ಮರಣವೆ ಯೋಗ್ಯವು ॥ ೩೭೩ ॥

ನಿಮ್ಮನು ಕೊಲ್ಲಲು ಕ್ಷಣವೇ ಸಾಕು
ಹಿಂದಿನ ಸೇವೆಯ ನೆನಸುತ ಉಳಿಸಿಹೆ
ಹೋಗಿರಿ ನೀಚರೆ ದೂರಕೆ ನೀವು
ಕಾಣೆನು ನಿಮ್ಮಯ ಮುಖಗಳ ಎಂದೂ || ३೭೪ ||

ಹೊರಟರು ಇಬ್ಬರು ನಮಿಸುತ ರಾಜಗೆ
ಲಜ್ಜಿತರಾಗುತ ಮುಖಗಳ ಎತ್ತದೆ
ರಾವಣ ಕರೆದನು ಮಹೋದರನನ್ನು
ಇಲ್ಲಿಗೆ ಕಳುಹಿಸು ಗೂಢಚಾರರನು || ३೭೫ ||

ನಂಬಿಗೆ ಪಾತ್ರರು ರಾಜಭಕ್ತರೂ
ಶೂರರು ನಿರ್ಭಯ ಚಾರರ ಕಳುಹಿಸು
ಕೂಡಲೆ ಬಂದರು ಚಾರರು ಅಲ್ಲಿಗೆ
ಆಣತಿಯಿತ್ತನು ರಾವಣನವರಿಗೆ || ३೭೬ ||

ರಾವಣನು ಗೂಢಚಾರರನ್ನು ಕಳಿಸುವದು

ಚಾರರೆ ಹೋಗಿರಿ ರಾಮನ ಕಡೆಗೆ
ತಿಳಿಯಿರಿ ರಾಮನು ಮಾಡುದನೇನನು
ಮಂತ್ರಾಲೋಚನೆ ಹೇಳುವರಾರು
ಯಾರಲಿ ಪ್ರೀತಿಯು ನೆಟ್ಟದೆ ಅವನದು || ३೭೭ ||

ರಾಮನ ನಿದ್ರೆಯ ಎಚ್ಚರ ಕೂಡಾ
ಬಿಡದಲೆ ಒಂದೂ ಪರಿಕಿಸಿ ನೀವು
ವೈರಿಯ ವಿವರವ ತಿಳಿಸಿರಿ ಎಲ್ಲವ
ಶಾರ್ದೂಲನಿರಲಿ ನಿಮ್ಮಯ ನಾಯಕ || ३೭೮ ||

ಹೊರಟರು ಎಲ್ಲರು ಗುಪ್ತವೇಷದಲಿ
ರಾಮ ಲಕ್ಷ್ಮಣರು ಇರುತಿಹ ತಾಣದಿ
ಸುವೇಲ ಪರ್ವತದಲ್ಲಿಗೆ ಬಂದರು
ವಿಭೀಷಣನಾಗ ಗುರುತಿಸಿ ಅವರನು || ೩೭೯ ||

ತಿಳಿಸಿದ ವಾನರವೀರರಿಗೆಲ್ಲಾ
ಕುಟ್ಟಿದರೆಲ್ಲರು ಮುಷ್ಟಿಲಿ ಗುದ್ದುತ
ಕಾಣುತ ರಾಮನು ಬಿಡಿಸಿದನವರನು
ಏದುತ ಓಡುತ ಬಂದರು ಲಂಕೆಗೆ || ೩೮೦ ||

**ಚಾರರ ವರದಿ**

ತಿಳಿಸಿದರಾಗಲೆ ರಾಜಗೆ ಎಲ್ಲರು
ರಾಮನ ಸೇನೆಯು ಇರುವದು ಅಪಾರ
ರಾಮನು ನೆಲೆಸಿಹ ಸುವೇಲ ಗಿರಿಯಲಿ
ತುಂಬಿಹರೆಲ್ಲೆಡೆ ವಾನರವೀರರು || ೩೮೧ ||

ಕಪಿಗಳ ಮಧ್ಯದಿ ಚಾರರ ಕೆಲಸವು
ಶಕ್ಯವೆ ಇಲ್ಲವು ಬಹುಬಲಯುತರು
ರಾಮನ ರಕ್ಷಣೆಯೊಂದೇ ಧ್ಯೇಯವು
ಬೇರೆಯ ಮಾತನು ಆಡರು ಯಾರೂ || ೩೮೨ ||

ಕೇಳುವದಂತೂ ದೂರೇ ಉಳಿಯಿತು
ರಾಕ್ಷಸ ಜನರೇ ಗುರುತಿಸಿ ಎಮ್ಮನು
ಕಪಿಗಳ ಏಟಿಗೆ ಕೊಟ್ಟರು ಬಲಿಯನು
ಎಮ್ಮಯ ಬವಣೆಯ ಕಾಣುತ ರಾಮನು || ೩೮೩ ||

ಬಿಡಿಸುತ ಎಮ್ಮನು ಅಟ್ಟಿದ ಲಂಕೆಗೆ
ಪರ್ವತ ಶಿಖರಗಳಲ್ಲದೆ ಬಂಡೆಯು
ತುಂಬುತ ಸಾಗರ ಸೇತುವೆ ನಿರ್ಮಿಸಿ
ಬಂದಿವೆ ಸೇನೆಯು ಸಿದ್ಧತೆಯೊಂದಿಗೆ || ೩೮೪ ||

ಗರುಡ ವ್ಯೂಹದಿ ನಿಂತಿದೆ ಸೇನೆಯು
ಲಂಕೆಯ ದ್ವಾರಕೆ ಬಂದಿದೆ ಆಗಲೆ
ಮುತ್ತುವ ಸಿದ್ಧತೆ ಆಗಿದೆ ಪೂರ್ತಿಯು
ಕೋಟೆಯ ಹತ್ತುವ ಸಿದ್ಧತೆಯಾಗಿದೆ || ೩೮೫ ||

ಕೂಡಲೆ ಸೀತೆಯ ಒಪ್ಪಿಸಿ ಕೊಡಿರಿ
ಇಲ್ಲವೆ ಘೋರದ ಯುದ್ಧವ ಮಾಡಿರಿ
ಯೋಚಿಸಿ ರಾವಣನೆಂದನು ಆಗಲೆ
ಯಾರೂ ಗೆಲ್ಲರು ಎನ್ನನು ನಿಶ್ಚಿತ || ೩೮೬ ||

ಸೀತೆಯ ಕಳಿಸುವ ಮಾತನೆ ಆಡದು
ಆದರೆ ತಿಳಿಸಿರಿ ಕಪಿಗಳು ಯಾರು
ವೀರರು ಯಾರಿಹ ಶಕ್ತಿಯು ಎಷ್ಟಿದೆ
ಮಾಚದೆ ಏನೂ ತಿಳಿಸಿರಿ ನಿಜವನು || ೩೮೭ ||

### ಕಪಿವೀರರ ವಿವರಣೆ

ಗದ್ಗದ ಪುತ್ರನು ಧೂಮ್ರನು ಇರುವನು
ಬೃಹಸ್ಪತಿ ಗುರುವ ಕೇಸರಿ ಕುವರನು
ಸುಷೇಣನಿರುವನು ವರುಣನ ಮಗನು
ದಧಿಮುಖ ವಾನರ ಚಂದ್ರನ ಕುಮಾರ || ೩೮೮ ||

ಸುಮುಖ ದುರ್ಮುಖರು ವೇಗದರ್ಶಿಯೂ
ವಾನರ ರೂಪದ ಮೃತ್ಯುಗಳೇ ಸರಿ
ನೀಲನು ಇರುವನು ಅಗ್ನಿಯ ಪುತ್ರನು
ಹನುಮನು ಇರುವನು ವಾಯುಕುವರನು ||೩೮೯||

ಅಂಗದನಿರುವನು ಇಂದ್ರನ ಮೊಮ್ಮಗ
ಮೈಂದ ದ್ವಿವಿದರು ಅಶ್ವಿನಿ ಕುವರರು
ಗವಾಕ್ಷ ಗವಯರು ಗಜಶರಭರೂ
ಗಂಧಮಾದನರು ಯಮಧರ್ಮಸುತರು ||೩೯೦||

ಶೌರ್ಯಾದಿ ಎಲ್ಲರು ತಂದೆಗೆ ಸರಿಸಮ
ದಶರಥ ಪುತ್ರನ ತಿಳಿದಿಹೆ ನೀನೂ
ಖರದೂಷಣ ತ್ರಿಶಿರರ ಎಲ್ಲರ
ಕೊಂದಿಹ ರಾಮನು ಯುದ್ಧದಿ ಅದಮ್ಯ ||೩೯೧||

ವಿರಾಧ ಕದಂಬ ರಕ್ಕಸವೀರರ
ಕೊಂದುದು ಗೊತ್ತಿದೆ ರಾಜನೆ ನಿನಗೆ
ಲಕ್ಷ್ಮಣ ಕೂಡಾ ಅಂತೆಯೆ ಇರುವನು
ವರುಣನ ಪುತ್ರನು ನಳನನು ಬಲ್ಲೆ ||೩೯೨||

ಶ್ವೇತ ಜ್ಯೋತಿಮುಖ ಸೂರ್ಯನ ಸುತರು
ಹೇಮಕೂಟನೋ ವರುಣನ ಪುತ್ರನು
ಕೇಳುತ ಈ ನುಡಿ ಯೋಚನೆ ಮಾಡುತ
ಕರೆದನು ಸಚಿವರ ಸಭೆಯನು ಅಂದೆಯೆ ||೩೯೩||

ರಾವಣನ ಮಾಯಾತಂತ್ರ

ಕೇಳುತ ಸಲಹೆಯ ಕಳಿಸಿದನವರನು
ಕರೆದನು ಮಾಯಾ ರಕ್ಕಸನೊಬ್ಬನ
ವಿದ್ಯುಜ್ಜಿಹ್ವನೆ ಕೇಳೈ ನಿಚ್ಚಳ
ಮಾಯೆಯ ರಾಮನ ತಲೆಯದು ಬೇಕಿದೆ ॥ ೩೯೪ ॥

ಸೀತೆಯ ವಂಚಿಸಿ ಕಾರ್ಯವ ಸಾಧಿಸೆ
ರಾಮನ ಬಿಲ್ಲಿನ ತರಹದಿ ಬಿಲ್ಲನು
ನಿರ್ಮಿಸು ಈಗಲೆ ಸಮಯವ ಕಳೆಯದೆ
ಹಾಗೆಯೆ ಮಾಡಿದ ಮಾಯಾ ನಿಪುಣನು ॥ ೩೯೫ ॥

ಸಂತಸದಿಂದಲಿ ಚಿನ್ನದ ಹಾರವ
ಕೊಡುತಲಿ ಅವನಿಗೆ ನಡೆದನು ರಾವಣ
ಅಶೋಕವನದಲಿ ಕುಳಿತಿಹ ಸೀತೆಯು
ಶೋಕದಿ ತಲೆಯನು ಎತ್ತದೆ ಇದ್ದಳು ॥ ೩೯೬ ॥

ರಾಮನ ಮಾಯಾ ರುಂಡ

ಉದ್ಧಟತನದಲಿ ರಾವಣ ಬಂದನು
ಸೀತೆಯೆ ಎಷ್ಟೋ ಹೇಳಿದೆನಾದರು
ಕೇಳದೆ ಮಾತನು ಗಂಡನ ನೆನೆಯುವ
ಮೂಢಳೆ ನೋಡೀ ರಾಮನ ರುಂಡವ ॥ ೩೯೭ ॥

ಖರದೂಷಣರನು ಕೊಂದಿಹನೆಂದೂ
ಜಗದಲಿ ಅವನೇ ಶೂರನು ಎನ್ನುವ
ಹಟದಲಿ ಕೊರಗುವ ನಾರಿಯೆ ಕೇಳು
ನಿನ್ನಯ ಗಂಡನ ಕೊಂದುದು ಹೇಗದು ॥ ೩೯೮ ॥

ಕಪಿಗಳ ಸೇನೆಯು ಸಂಗಡ ಬರುತಲಿ
ಲಂಕೆಯ ದ್ವಾರದ ಎದುರಿಗೆ ನಿಂತನು
ರಾತ್ರಿಯ ಸಮಯದಿ ಮಲಗಿದರೆಲ್ಲರು
ಚಾರರ ಮೂಲಕ ವಿಷಯವು ತಿಳಿಯಿತು || ೩೯೯ ||

ಪ್ರಹಸ್ತ ಒಯ್ದನು ರಕ್ಕಸ ಸೇನೆಯ
ಒಮ್ಮೆಲೆ ಬಿದ್ದನು ಕಪಿಗಳ ಮೇಲೆಯೆ
ಮಲಗಿದ ರಾಮನ ತಲೆಯನು ಕಡಿದನು
ವಿಭೀಷಣನಾಗ ಕೈಸೆರೆಯಾದನು || ೪೦೦ ||

ಲಕ್ಷ್ಮಣ ಓಡಿದ ಕಪಿಗಳ ಸಹಿತದಿ
ಸುಗ್ರೀವನಾಗ ಓಡುವ ಭರದಲಿ
ಸಿಕ್ಕನು ರಕ್ಕಸವೀರನ ಕೈಯಲಿ
ಗೋಣನು ಮುರಿಯುತ ಕೆಡವಿದನವನನು || ೪೦೧ ||

ಹನುಮನ ದವಡೆಯು ಮುರಿಯಿತು ಆಗಲೆ
ಬಿದ್ದಿಹನವನೂ ರಾಮನ ಜೊತೆಗೆ
ವಾನರವೀರರು ಎಲ್ಲರು ಮಡಿದರು
ಕಂಡರು ಸಾಗರ ತಳವನು ಕಪಿಗಳು || ೪೦೨ ||

ಓಡಲು ನೆಲವೇ ಇಲ್ಲದ ಕಾರಣ
ವಾನರ ಸೇನೆಯು ಕರಗಿತು ಎಲ್ಲವು
ರಾಮನ ತಲೆಯನು ತಂದಿಹ ರಕ್ಕಸ
ಇಲ್ಲಿಯೆ ಇರುವನು ನೋಡೆಲೆ ಅವನನು || ೪೦೩ ||

ಎನ್ನುತ ಎದುರಿಗೆ ಬಂದನು ರಾವಣ
ರಾಮನ ಶಿರವನು ಇಟ್ಟನು ನೆಲದಲಿ
ಜೊತೆಗೇ ಇಟ್ಟನು ಬಿಲ್ಲನು ಕೂಡಾ
ನೋಡೆಲೆ ಸೀತೆಯೆ ಶಿರವನು ಬಿಲ್ಲನು ॥ ೪೦೪ ॥

ಎನ್ನನು ಬಿಟ್ಟರೆ ಗತಿಯಾರು ನಿನಗೆ
ಜಾನಕಿ ನೋಡುತ ಮಾಯಾ ಶಿರವನು
ಬಣ್ಣವು ಮುಖವೂ ಕಣ್ಗಳು ಕೂಡಾ
ಕೂದಲು ಹಣೆಯೂ ಚೂಡಾಮಣಿಯೂ ॥ ೪೦೫ ॥

ಸೀತೆಯ ದುಃಖ

ಇದ್ದುದ ನೋಡುತ ನಿಜವೆಂದರಿಯುತ
ದುಃಖಿತಳಾದಳು ಜನಕನಂದಿನಿಯು
ಕೈಕೇಯಿ ಇಚ್ಛೆಯೆ ಫಲಿಸಿತು ಕೊನೆಗೂ
ಎಮ್ಮಯ ವಂಶದ ಕುಡಿಯೇ ಕಮರಿತು ॥ ೪೦೬ ॥

ದೀರ್ಘಾಯುಷ್ಯವು ಇರುವದು ಎನ್ನುವ
ಜ್ಯೋತಿಷವಾಣಿಯು ಅನೃತವಾಯಿತೆ
ವಿಧವೆಯ ಪಟ್ಟವು ಬಂದಿತೆ ಎನಗೂ
ನಿದ್ರೆಯ ಪ್ರಮಾದವಾದುದು ಎಂತು ॥ ೪೦೭ ॥

ಎನ್ನಯ ಕಾರಣ ಮರಣವನಪ್ಪಿದೆ
ಮಡದಿಯೆ ಗಂಡಗೆ ಮೃತ್ಯುವು ಆದಳೆ
ಯಾವುದೊ ಪಾಪವು ಮೆತ್ತಿದೆ ಎನಗೆ
ರಾವಣ ಈಗಲೆ ಕೊಲ್ಲೆಲೊ ಎನ್ನನು ॥ ೪೦೮ ॥

ರಾಮನ ಜೊತೆಗೂ ಎನ್ನನು ಸೇರಿಸು
ಆಗಿನ ಸಮಯದಿ ರಕ್ಕಸ ಪಡೆಯು
ಬಂದಿತು ಅಲ್ಲಿಗೆ ಜಯಜಯ ಎನ್ನುತ
ಪ್ರಭುವೆ ಪ್ರಹಸ್ತ ಕಾದಿಹ ಹೊರಗಡೆ || ೪೦೯ ||

ಜೊತೆಗೇ ಇರುವರು ಸಚಿವರು ಎಲ್ಲರು
ಯಾವುದೊ ಕಾರ್ಯವು ಇರುವದು ತಿಳಿಸಲು
ನಿನ್ನಯ ಆಣತಿ ಇಲ್ಲದೆ ಆಗದು
ಕೂಡಲೆ ಹೋಗುತ ದರ್ಶನ ಕೊಡು ನೀ || ೪೧೦ ||

ರಾಮನ ಮಾಯಾಶಿರವು ಅದೃಶ್ಯವಾಗುವದು

ರಾವಣ ಹೊರಟನು ಕೂಡಲೆ ಹೊರಗೆ
ಆಯಿತು ರಾಮನ ಶಿರವೂ ಮಾಯವು
ಹೋಯಿತು ಬಿಲ್ಲೂ ಕಾಣದೆ ಆಗಲೆ
ರಾವಣನೆಂದನು ದುಂದುಭಿ ಮೊಳಗಿಸಿ || ೪೧೧ ||

ಯುದ್ಧಕೆ ಸಿದ್ಧರು ಆಗಿರಿ ಈಗಲೆ
ಯುದ್ಧದ ದುಂದುಭಿ ಮೊಳಗಲಿ ಎಲ್ಲೆಡೆ
ಎನ್ನಯ ಮಾತಿಗೆ ಬೇರೆಯೆ ಇಲ್ಲಾ
ಆಯಿತು ಲಂಕೆಯು ಯುದ್ಧಕೆ ಸಿದ್ಧವು || ೪೧೨ ||

ದುಃಖದ ವೇಗದಿ ಎಚ್ಚರ ತಪ್ಪುತ
ಬಿದ್ದಳು ಸೀತೆಯು ನೆಲದಲಿ ಆಗಲೆ
ವಿಭೀಷಣ ಸತಿಯು ಸರಮೆಯು ಬರುತಲಿ
ಎತ್ತುತ ಸೀತೆಯ ತಲೆಯನು ಅಂದಳು || ೪೧೩ ||

## ಸೀತೆಗೆ ಸರಮೆಯ ಸಾಂತ್ವನ

ಜಾನಕಿ ಕೇಳದೆ ನೋಡಿದೆ ಎಲ್ಲವ
ರಾವಣ ಹೋದುದು ಕಾರಣ ಬಲ್ಲೆನು
ರಾಮನ ಕೊಂದಿಹ ಮಾತೇ ಸುಳ್ಳಿದೆ
ಕಪಿಗಳ ನಾಶವು ಸುಳ್ಳಿನ ಬಳ್ಳಿಯು ॥ ೪೧೪ ॥

ಮಾಯೆಯ ಆಟವು ನಡೆದುದು ಎಲ್ಲವು
ಧನುವೂ ಶಿರವೂ ಮಾಯದ ಕೆಲಸವು
ಬರುತ್ತಿದೆ ಕೊನೆಯು ನಿನ್ನಯ ದುಃಖಕೆ
ರಾಮನು ಬಂದಿಹ ಲಂಕೆಯ ದ್ವಾರಕೆ ॥ ೪೧೫ ॥

ಲಕ್ಷ್ಮಣ ವಾನರವೀರರು ಎಲ್ಲರು
ಬರುತಲಿ ಇರುವರು ಕೋಟೆಯ ಹೊರಗಡೆ
ತಿಳಿಯುತ ಅದನೇ ಓಡಿದ ರಾವಣ
ಮುಂದಿನ ಯೋಜನೆ ಮಾಡಲು ಹೋದನು ॥ ೪೧೬ ॥

ಕೇಳಲೆ ಮೊಳಗುವ ಭೀಕರ ಭೇರಿಯ
ಯುದ್ಧದ ಸಿದ್ಧತೆ ನಡೆದಿದೆ ಎಲ್ಲೆಡೆ
ಆನೆಯು ಕುದುರೆಯು ರಥಗಳ ಸಪ್ಪಳ
ಕೇಳುವದಿಲ್ಲವೆ ಮೈಥಿಲಿ ನಿನಗೆ ॥ ೪೧೭ ॥

ನಿಮ್ಮಯ ದೇವನ ಸೂರ್ಯನ ಭಜಿಸು
ಕಷ್ಟದ ಕತ್ತಲೆ ಹರಿಯುತ ಬಂದಿತು
ರಾಮನ ಮುಖದಲಿ ಸೂರ್ಯನ ಕಾಣುವಿ
ಬೀಳುವದೆಲ್ಲೆಡೆ ಸಂತಸ ಬೆಳಕು ॥ ೪೧೮ ॥

ಸರಮೆಯು ಹಿತಕರ ನುಡಿಯನು ಕೇಳುತ
ಸೀತೆಯು ಮನದಲಿ ಇಳಿಂತು ಶಾಂತಿಯು
ಆದರು ಬೇಗುದಿ ಹೋಗದು ಒಮ್ಮೆಲೆ
ಸರಮೆಯು ಅಂದಳು ಸೀತೆಗೆ ಆಗಲೆ ॥ ೪೧೯ ॥

ಸುಂದರ ವದನೆಯೆ ಒಪ್ಪಿಗೆಯಾದರೆ
ಈಗಲೆ ಹೋಗುತ ರಾಮನ ಕಡೆಗೆ
ಕುಶಲದ ವಾರ್ತೆಯ ಮುಟ್ಟಿಸಿ ಬರುವೆನು
ಗಗನದಿ ಹೋಗುವ ಎನ್ನಯ ಸಂಗಡ ॥ ೪೨೦ ॥

ಯಾರೂ ಬಾರರು ತಿಳಿದಿರು ನೀನು
ಗರುಡನು ಕೂಡಾ ಬಾರನು ಜೊತೆಗೆ
ಗಗನದಿ ಚಲಿಸಲು ಬಲ್ಲೆನು ನಾನು
ಭೂತಳ ತಳಕೂ ಹೋಗಲು ಬಲ್ಲೆನು ॥ ೪೨೧ ॥

ಜಾನಕಿಯೆಂದಳು ಮೆಚ್ಚಿನ ಗೆಳತಿಯೆ
ಬಲ್ಲೆನು ನಿನ್ನಯ ಶಕ್ತಿಯ ನಾನೂ
ಪ್ರಿಯವನು ಮಾಡುವದಾದರೆ ನೀನು
ರಾವಣ ಮಾಡುವದೇನದು ತಿಳಿ ನೀ ॥ ೪೨೨ ॥

ಕ್ರೂರನು ದುರುಳನು ಮೋಸದ ರಕ್ಕಸ
ಹೆದರಿಸಿ ಬೆದರಿಸಿ ಕಾಡುವನೆನ್ನನು
ಎನ್ನಯ ಬುದ್ಧಿಗೆ ಮಂಕದು ಕವಿದಿದೆ
ರಾವಣ ಯೋಜನೆ ಅರಿಯುತ ಬಾ ನೀ ॥ ೪೨೩ ॥

## ರಾವಣನ ಯೋಜನೆಯನ್ನು ತಿಳಿಯಲು ಸರಮೆಯ ಗಮನ

ಆಗಲಿ ಎನ್ನುತ ಸರಮೆಯು ಹೊರಟಳು
ಯಾರಿಗು ಕಾಣದೆ ಕೇಳುತ ಮಾತನು
ಬಂದಳು ಸೀತೆಗೆ ಹೇಳಲು ಅವಳು
ಕೇಳೆಲೆ ಜಾನಕಿ ಹೇಳುವೆ ಎಲ್ಲವ || ೪೨೪ ||

ರಾವಣ ತಾಯಿಯು ಕೈಕಸಿ ದೇವಿಯು
ಅಲ್ಲದೆ ಮಂತ್ರಿಯು ವೃದ್ಧ ಅವಿದ್ಧನು
ಹೇಳಿದರಿಬ್ಬರು ಪಂಪರಿಯಿಂದಲಿ
ನಿನ್ನನು ಬಿಡುತಲಿ ಸಂಧಿಯ ಮಾಡಲು || ೪೨೫ ||

ಜನಸ್ಥಾನದಲಿ ರಾಮನ ಶಕ್ತಿಯು
ತಿಳಿದಿದೆ ನಿಚ್ಚಳ ಅಷ್ಟೇ ಸಾಕು
ಹನುಮನು ಒಬ್ಬನೆ ಸಾಗರ ದಾಟುತ
ಲಂಕೆಯ ಸೇರುತ ಸುಟ್ಟನು ಇದನು || ೪೨೬ ||

ಕಪಿಗಳು ಮನುಜನು ಮಾಡುವ ಕೆಲಸವೆ
ಬಿಡು ನೀ ಹಟವನು ಸಂಧಿಯ ಮಾಡಿಕೊ
ಎನ್ನುವ ಮಾತನು ಕೇಳದೆ ರಾವಣ
ಯುದ್ಧವ ಮಾಡುವ ನಿಶ್ಚಯ ಮಾಡಿಹ || ೪೨೭ ||

ಸಭೆಯಲಿ ರಾವಣ ಸಚಿವರ ನೋಡುತ
ಅಂದನು ಚುಚ್ಚುವ ಮಾತನು ಅವರಿಗೆ
ಸಚಿವರೆ ವಾನರವೀರರ ಸೇನೆಯು
ಸಾಗರ ದಾಟುತ ಲಂಕೆಗೆ ಬಂದುದು || ೪೨೮ ||

ಅಲ್ಲದೆ ರಾಮನ ಶೌರ್ಯವ ಹೇಳುತ
ಒಬ್ಬರ ಮುಖವನು ಒಬ್ಬರು ನೋಡುತ
ಕುಳಿತರೆ ಆಯಿತೆ ಮಾಡುವ ಕೆಲಸವು
ಎನ್ನಲು ಎದ್ದನು ಒಬ್ಬನು ರಕ್ಕಸ || ೪೨೯ ||

**ಮಾಲ್ಯವಂತನಿಂದ ರಾವಣನಿಗೆ ವಿವೇಕದ ನುಡಿ**

ವಿವೇಕಶಾಲಿಯು ಮಾಲ್ಯವಂತನು
ವತ್ಸನೆ ರಾವಣ ಲಾಲಿಸಿ ಕೇಳೈ
ನೀತಿಯು ಶಾಸ್ತ್ರದಿ ಆಳುವ ರಾಜನು
ತಾಳುವ ಬಾಳುವ ಬಹು ಬಹು ಕಾಲವ || ೪೩೦ ||

ಐಸಿರಿ ಹೊಂದುವ ವೈರಿಯು ಗೆಲ್ಲುವ
ಸಮಯುವ ಯೋಚಿಸಿ ಸಂಧಿಯು ಯುದ್ಧವ
ಮಾಡುವ ಚಿತ್ತವ ಬೆಳೆಸಲು ಬೇಕು
ವೈರಿಗೆ ಬಲದಲಿ ಕಡಿಮೆಯೆ ಇದ್ದರು || ೪೩೧ ||

ಇಲ್ಲವೆ ಇದ್ದರು ಸರಿಸಮ ವೈರಿಗೆ
ಸಂಧಿಯೆ ಯೋಗ್ಯವು ಇದುವೇ ನೀತಿಯು
ತನ್ನಯ ಶಕ್ತಿಯು ಅಧಿಕವು ಇದ್ದರೆ
ಆಗಲೆ ಯುದ್ಧವು ಯೋಗ್ಯದ ಮಾರ್ಗವು || ೪೩೨ ||

ಯಾವುದೆ ಸಮಯದಿ ವೈರಿಯ ಬಗೆಯಲಿ
ಉಪೇಕ್ಷೆ ಭಾವನೆ ಕೂಡದು ತಿಳಿ ನೀ
ಇಂತಹ ಸಮಯದಿ ಸಂಧಿಯೆ ಹಿತಕರ
ಯೋಚಿಸಿ ಯೋಚಿಸಿ ಕೆಲಸವ ಮಾಡು || ೪೩೩ ||

ವರವನು ಪಡೆದಿಹೆ ಒಲ್ಲೆನು ನಾನು
ದೇವರು ದಾನವ ರಾಕ್ಷಸ ಯಕ್ಷರು
ಕೊಲ್ಲರು ಯಾರೂ ನಿನ್ನನು ನಿಜಕೂ
ತಿಳಿಯದೆ ರಾಮನು ಇರುವನು ಮನುಜನು || ೪೩೪ ||

ಅಲ್ಲದೆ ಬಂದವರೆಲ್ಲರು ಕಪಿಗಳು
ಇರುವದೆ ರಕ್ಷಣೆ ಇವರಿಂ ವರದಲಿ
ಅನಿಷ್ಟ ಕಾಣುವ ಶಕುನವ ನೋಡು
ತಿಳಿಯದೆ ಶಕುನದ ಅರ್ಥವು ನಿನಗೆ || ೪೩೫ ||

**ಅನಿಷ್ಟ ಶಕುನಗಳು**

ಘೋರಾಕಾರದ ಮೋಡಗಳಲ್ಲಿಡೆ
ಸುರಿಸುತಲಿರುವವು ರಕ್ತದ ಮಳೆಯನು
ಕುದುರೆಗಳೆಲ್ಲವು ಅಳುವದು ಏತಕೆ
ಧ್ವಜ ಪತಾಕೆಗಳ ಬಣ್ಣವು ಮಾಸಿದೆ || ೪೩೬ ||

ಹದ್ದಿನ ನರಿಯದು ಕೂಗದು ಕೇಳದೆ
ಎಲ್ಲವ ಯೋಚಿಸಿ ನಡೆಯುವದೊಳಿತು
ಕೇಳುತ ಈ ನುಡಿ ರಾವಣನೆಂದನು
ಮಾತಾಮಹನೇ ಕೇಳಿದೆ ಮಾತನು || ೪೩೭ ||

**ಹಿತನುಡಿಗೆ ರಾವಣನ ತಿರಸ್ಕಾರ**

ಹಿತವಿಹ ನುಡಿಯನು ಎನ್ನುತ ಹೇಳಿದೆ
ಆದರೆ ಇರುವದು ಅಹಿತದ ನುಡಿಯೇ
ವೈರಿಯ ಪಕ್ಷವು ಆಡುವ ಮಾತಿದು
ಇಂತಹ ನುಡಿಯೋ ಕಿವಿಯನು ಸೇರದು || ೪೩೮ ||

ರಾಮನು ಇರುವನು ಮಾನವ ಮಾತ್ರನು
ಅಲ್ಲದೆ ಇರುವನು ಕಪಿಗಳ ನಾಯಕ
ಸಮರ್ಥನೆನ್ನಲು ಕಾರಣವಾವುದು
ನಾನೋ ಇರುವೆನು ರಕ್ಕಸರಾಜನು || ೪೩೯ ||

ಶಕ್ತಿಯು ಸೆಲೆಯೂ ನೆಲೆಯೂ ಆಗಿಹೆ
ಎನ್ನಯ ಶಕ್ತಿಯ ಕಲ್ಪನೆಯಿಲ್ಲದೆ
ಅಥವಾ ಅಸೂಯೆ ತುಂಬಿದೆ ನಿಮ್ಮಲಿ
ವೈರಿಯ ಬೆಂಬಲ ಇರುವದೆ ನಿಮಗೆ || ೪೪೦ ||

ಸುಂದರ ಸೀತೆಯ ತಂದಿಹೆನಿಲ್ಲಿಗೆ
ಹೆದರುತ ರಾಮಗೆ ಹಿಂದಕೆ ಕೊಡಲೆ
ಬಂದಿಹ ಕಪಿಗಳ ಅಲ್ಲದೆ ರಾಮನ
ಕೊಚ್ಚುತ ಚೆಲ್ಲುವೆ ನೋಡಿರಿ ಎಲ್ಲರು || ೪೪೧ ||

ಬಂದಿಹ ರಾಮನು ಮರಳನು ಎಂದಿಗು
ಜೀವದ ಸಹಿತದಿ ತಿಳಿದಿರಿ ಎಲ್ಲರು
ಕೇಳುತ ಈ ನುಡಿ ಮಾತಾಮಹನು
ತಿಳಿದನು ವಚನದ ವಿಫಲತೆ ಆಗಲೆ || ೪೪೨ ||

ಏಳುತ ಅಂದನು ಜಯಜಯ ರಾಜನೆ
ಯೋಚಿಸಿ ಮಾಡಿರಿ ಯೋಗ್ಯವು ಆದುದು
ಅಪ್ಪಣೆ ಕೊಟ್ಟರೆ ಹೋಗುವೆ ಮನೆಗೆ
ಎನ್ನುತ ನಡೆದನು ಸಭೆಯಿಂ ಹೊರಗೆ || ೪೪೩ ||

ರಾವಣನ ಯುದ್ಧ ಸಿದ್ಧತೆ

ಕೂಡಲೆ ಮಾಡಿದ ರಕ್ಷಣೆ ಯೋಜನೆ
ಪ್ರಹಸ್ತ ಕಾಯಲಿ ಪೂರ್ವದ ದ್ವಾರವ
ದಕ್ಷಿಣ ದಿಕ್ಕಿಗೆ ಮಹಾಪಾರ್ಶ್ವನೂ
ಮಹೋದರವರರು ರಕ್ಕಸವೀರರು || ೪೪೪ ||

ಪಶ್ಚಿಮ ದಿಕ್ಕಿಗೆ ವೀರ ಇಂದ್ರಜಿತು
ಉತ್ತರ ದ್ವಾರಕೆ ಶುಕಸಾರಣರೂ
ಅಲ್ಲಿಯೆ ಇರುವೆನು ನಾನೂ ಕೂಡಾ
ಅಲ್ಲದೆ ಇನ್ನೂ ಸೂಚನೆಯಿತ್ತನು || ೪೪೫ ||

ಎಲ್ಲರು ಕಾಯಿರಿ ಬಲಯುತವಾಗಿಯೆ
ತಿಳಿಯಿರಿ ಎಮ್ಮಯ ಗೌರವ ಪ್ರಶ್ನೆಯು
ಇರುವದು ಇದರಲಿ ನೆನಪಿಡಿ ಎನ್ನುತ
ರಾವಣ ನಡೆದನು ಅಂತಃಪುರದೆಡೆ || ೪೪೬ ||

ಶ್ರೀರಾಮನ ಶಿಬಿರದಲ್ಲಿ ಮಂತ್ರಾಲೋಚನೆ

ಇತ್ತಲು ನಡೆದಿದೆ ರಾಮನ ಸೈನ್ಯದಿ
ವೀರರ ಸಭೆಯಲಿ ಚರ್ಚೆಯು ಮಾಡಲು
ಕುಳಿತಿಹರಲ್ಲಿಯೆ ರಾಮ ಸುಗ್ರೀವ
ಹನುಮನು ಜಾಂಬವ ವಿಭೀಷಣ ಶರಭ || ೪೪೭ ||

ಅಂಗದ ಲಕ್ಷ್ಮಣ ಸುಷೇಣ ಮೈಂದರು
ದ್ವಿವಿಧ ಗವಾಕ್ಷ ಗಜ ನಳ ಗವಯರು
ಅಲ್ಲದೆ ಪನಸನು ಸುಷೇಣಪುತ್ರನು
ದುರ್ಜಯ ಲಂಕೆಯ ಗೆಲೆಯುವದೆಂತು || ೪೪೮ ||

ವಿಭೀಷಣ ನುಡಿದ ಕೇಳಿರಿ ಎಲ್ಲರು
ಎನ್ನಯ ಸಚಿವರು ನಾಲ್ವರು ಇರುವರು
ಹೆಸರಿದೆ ಅವರಿಗೆ ಸಂಪಾತಿ ಶರಭ
ಅನಲ ಪ್ರಘಸರು ಪಕ್ಷಿಯ ರೂಪದಿ || ೬೬೯

ಲಂಕೆಯ ಸೇರುತ ರಕ್ಷಣೆ ತಿಳಿಯುತ
ಅಲ್ಲಿಯ ಸೇನೆಯ ರಚನೆಯು ಹೇಗಿದೆ
ಪ್ರಹಸ್ತ ನಿಂತಿಹ ಪೂರ್ವದ ದ್ವಾರದಿ
ಮಹಾಪಾರ್ಶ್ವನೂ ಮಹೋದರ ಸಹಿತ || ೪೫೦ ||

ಕಾಯುವ ದಕ್ಷಿಣ ದಿಕ್ಕಿನ ದ್ವಾರವ
ಪಶ್ಚಿಮ ದ್ವಾರಕೆ ಇಂದ್ರಜಿತು ಇರುವ
ಉತ್ತರ ದ್ವಾರಕೆ ರಾವಣನಿರುತಿಹ
ಜೊತೆಗೇ ಇರುವರು ಶುಕಸಾರಣರೂ || ೪೫೧ ||

ಕೋಟಿ ಕೋಟಿಯಲಿ ಸೇನೆಯು ನಿಂತಿದೆ
ನಗರದ ಮಧ್ಯದಿ ವಿರೂಪಾಕ್ಷನಿಹ
ಸಾಸಿರ ಗಜಯುತ ಯೋಧರು ಇರುವರು
ದ್ವಿದಶ ಸಹಸ್ರ ಕುದುರೆಯ ಯೋಧರು || ೪೫೨ ||

ರಥಿಕರು ಇರುವರು ಹತ್ತು ಸಾವಿರದಿ
ಎಲ್ಲರು ಇರುವರು ಯುದ್ಧಕೆ ಸಿದ್ಧರು
ಅಣ್ಣನ ಗೆದೆಯಲು ಹಿಂದಕೆ ರಾವಣ
ಒಯ್ದಿಹ ಸೇನೆಯ ಅರವತ್ತು ಲಕ್ಷ || ೪೫೩ ||

ಈಗಲೊ ಇರುವರು ಕೋಟಿಕೋಟಿಯಲಿ
ವೈರಿಯ ನಿಶ್ಚಿತ ಬಲವನು ತಿಳಿಸಿಹೆ
ವೈರಿಯ ಹೊಗಳಿಕೆ ಅಲ್ಲವು ಇದುವೇ
ಯೋಚಿಸು ಸೈನ್ಯವ ವಿಭಜಿಸು ವೀರನೆ ॥ ೪೫೪ ॥

**ಶ್ರೀರಾಮನಿಂದ ಸೇನೆಯ ಯೋಜನೆ**

ಕೇಳುತ ಈ ನುಡಿ ರಾಮನು ಒಪ್ಪುತ
ಅಂದನು ವೀರರೇ ಕೇಳಿರಿ ಎಲ್ಲರು
ನೀಲನು ಹೋಗಲಿ ಪೂರ್ವದ ದ್ವಾರಕೆ
ಅಂಗದ ತಡೆಯಲಿ ದಕ್ಷಿಣ ದ್ವಾರದಿ ॥ ೪೫೫ ॥

ಹನುಮನು ಹೋಗಲಿ ಪಶ್ಚಿಮ ದಿಕ್ಕಿಗೆ
ನಾನೇ ನಿಲ್ಲುವೆ ಉತ್ತರ ದ್ವಾರಕೆ
ಲಕ್ಷ್ಮಣ ಎನ್ನಯ ಸಂಗಡವಿರಲಿ
ಸೇನೆಯ ಮಧ್ಯದಿ ವಿಭೀಷಣ ಸಹಿತ ॥ ೪೫೬ ॥

ಜಾಂಬವ ನಿಲ್ಲಲಿ ಸೇನೆಯ ಕಾಯುತ
ಯುದ್ಧದ ಸಮಯದಿ ವಾನರವೀರರು
ಯಾರೂ ತಳೆಯದು ಮಾನವ ರೂಪವ
ತಿಳಿಯಿರಿ ಎಲ್ಲರು ಮರೆಯದೆ ಇದನು ॥ ೪೫೭ ॥

ಕೇವಲ ಏಳೇ ಜನರಿಗೆ ಮಾತ್ರವೆ
ಮಾನವ ರೂಪವು ಎಮ್ಮಯ ಸೈನ್ಯದಿ
ವಿಭೀಷಣ ನಾನು ಲಕ್ಷ್ಮಣನಲ್ಲದೆ
ರಾಕ್ಷಸ ಸಚಿವರು ನಾಲ್ವರು ಅಷ್ಟೇ ॥ ೪೫೮ ॥

### ಸುವೇಲ ಶಿಖರದಿಂದ ಲಂಕೆಯನ್ನು ನೋಡುವದು

ನಂತರ ಹೊರಟನು ರಾಮನು ಆಗಲೆ
ಲಂಕೆಯ ನೋಡಲು ಸುವೇಲ ಶಿಖರಕೆ
ಅಲ್ಲಿಗೆ ಕಾಣುವ ಲಂಕಾನಗರವ
ನೋಡಲು ಬಯಸಿದ ರಾಮನು ಆಗಲೆ || ೪೫೯ ||

ರಾಮನು ಅಂದನು ವೀರರ ನೋಡುತ
ಕಾಲನ ವಶವಿಹ ಪಾಪಿಯು ಒಬ್ಬನು
ಮಾಡುವ ಕಾರ್ಯಕೆ ಕುಲವೇ ಬಲಿಯು
ರಕ್ಕಸರಳಿವಿಗೆ ರಾವಣ ಕಾರಣ || ೪೬೦ ||

ಎಲ್ಲರು ಹೋಗುತ ಶಿಖರದ ತುದಿಯಲಿ
ಕಂಡರು ಲಂಕೆಯ ತ್ರಿಕೂಟಾಗ್ರದಲಿ
ಸುಂದರ ಬಂಧುರ ಕೋಟೆಯ ಒಳಗಡೆ
ಅತಿಶಯ ಸುಂದರ ಲಂಕಾನಗರವ || ೪೬೧ ||

ನೋಡುತ ನೋಡುತ ಹೋದರು ತುದಿಗೆ
ಕಂಡಿತು ರಾವಣ ಸೌಧವು ಅಲ್ಲಿಗೆ
ರಾವಣ ಕುಳಿತಿಹ ಗೋಪುರ ತುದಿಯಲಿ
ನೋಡುತಲಿರುವನು ಇವರನು ಹಾಗೆಯೆ || ೪೬೨ ||

### ಸುಗ್ರೀವ ರಾವಣರ ಹೋರಾಟ

ಕ್ಷಣದಲಿ ಎದ್ದನು ಸುಗ್ರೀವನಾಗ
ಏನಿದು ಎನ್ನುತ ಕೇಳುವ ಮೊದಲೇ
ನೆಗೆದನು ಗಗನದಿ ರಾವಣನೆಡೆಗೆ
ಶ್ವೇತಛತ್ರದಲಿ ಮೆರೆಯುವ ಅವನೆಡೆ || ೪೬೩ ||

ರಕ್ಕಸರಾಜನೆ ಸುಗ್ರೀವನಿರುವೆ
ರಾಮನ ಸ್ನೇಹಿತ ವಾನರರಾಜನು
ಮಾಡುವೆ ನಿನ್ನನು ಪುಡಿಪುಡಿ ಇಂದೆಯೆ
ಎನ್ನುತ ಕಿತ್ತನು ರಾಜನ ಕಿರೀಟ || ೪೬೪ ||

ಕಾಲಿಲೆ ಒದೆಯುತ ಚಿಮ್ಮಿದನಾಕಡೆ
ರಾವಣನೆದ್ದನು ಘುಡಿಘುಡಿಸುತಲೇ
ಸುಗ್ರೀವ ನೋಡು ಕುತ್ತಿಗೆ ಮುರಿಯುತ
ಮಾಡುವೆ ನಿನ್ನನು ಹೀನಗ್ರೀವನ || ೪೬೫ ||

ಎನ್ನುತ ಹೊಡೆದನು ಸುಗ್ರೀವನೆದೆಗೆ
ರಕ್ಕಸರಾಜನು ವಾನರರಾಜನು
ತೆಕ್ಕೆಯ ಬೀಳುತ ಕುಕ್ಕುತ ವೈರಿಯ
ಮೆಟ್ಟುತ ಕೆಡವುತ ಒಬ್ಬರನೊಬ್ಬರು || ೪೬೬ ||

ಕಾದಿದರಾಗಲೆ ಭೀಕರ ತೆರದಲಿ
ಕುಸ್ತಿಯ ಪಟ್ಟನು ಬಿಗಿಯುತ ಇಬ್ಬರು
ಕಾದುತ ಕಾದುತ ಬಿದ್ದರು ಕೆಳಗಡೆ
ತೆಕ್ಕೆಯ ಬಿಡದಲೆ ಕಂದಕದೊಳಗೆ || ೪೬೭ ||

ಕೂಡಲೆ ಇಬ್ಬರು ನೆಗೆದರು ಮೇಲಕೆ
ಗೋಪುರ ಮೇಲೆಯೆ ನಡೆಯಿತು ಕದನವು
ಕೊಬ್ಬಿದ ಹೆಬ್ಬುಲಿ ಸೆಣಸುವ ತೆರದಲಿ
ಪಟ್ಟನು ಹಾಕುತ ಗರ್ಜನೆಗೈದರು || ೪೬೮ ||

ಇಬ್ಬರು ಯುದ್ಧದಿ ಸಮಬಲರಿದ್ದರು
ಕೂಡಲೆ ರಾವಣ ನೀತಿಯ ಬದಲಿಸಿ
ಮಾಯಾಬಲವನು ತೋರಿಸತೊಡಗಿದ
ವಾನರರಾಜನು ತಿಳಿದನು ಮೋಸವ || ೪೭೯ ||

ಕೂಡಲೆ ನೆಗೆಯುತ ಗಗನದಿ ಆತನು
ನಿಲ್ಲದೆ ಬಂದನು ರಾಮನ ಹತ್ತಿರ
ಒಮ್ಮೆಲೆ ಹೋಗುವ ತಂತ್ರವನರಿಯದೆ
ರಾವಣ ನಿಂತನು ಸಿಟ್ಟಲಿ ನೋಡುತ || ೪೮೦ ||

ರಾಜನ ಸಾಹಸ ನೋಡುವ ಕಪಿಗಳು
ಸೆಣಸಿಯೆ ಬಂದಿಹ ರಾಜನ ನೋಡುತ
ಗರ್ಜನೆಗೈದರು ಸಂತಸದಿಂದಲಿ
ಕುಣಿದರು ಎಲ್ಲೆಡೆ ಲಂಕೆಯ ಹೊರಗಡೆ || ೯೮೧ ||

ಶ್ರೀರಾಮನಿಂದ ಸುಗ್ರೀವನಿಗೆ ಮಾರ್ಗದರ್ಶನ

ರಾಮನು ಅಪ್ಪುತ ಸುಗ್ರೀವನನ್ನು
ಅಂದನು ಮಿತ್ರನೆ ಎಂತಹ ಕೆಲಸವು
ಎನ್ನನು ಕೇಳದೆ ಯೋಚನೆ ಮಾಡದೆ
ಇಂತಹ ಕೆಲಸವು ಅಪಾಯಕಾರಕ || ೪೮೨ ||

ಎನ್ನನು ಕೇಳದೆ ಎಂದಿಗು ನೀನು
ಇಂತಹ ಕಾರ್ಯಕೆ ಹೋಗಲೆ ಬೇಡಾ
ನಿನ್ನಯ ಜೀವಕೆ ಅಪಾಯವಲ್ಲದೆ
ಮರಳುತ ಬಾರದೆ ಇದ್ದರೆ ಏನು || ೪೮೩ ||

ನಿಶ್ಚಯವಿದ್ದಿತು ಎನ್ನಯ ಕಾರ್ಯವು
ಕೊಲ್ಲುತ ವೈರಿಯ ತನುಜರ ಸಹಿತದಿ
ಲಂಕೆಯ ಪಟ್ಟಣ ವಿಭೀಷಣಗಿರಿಸಿ
ಕೋಸಲರಾಜ್ಯದ ಭರತಗೆ ಕೊಡುತಲಿ || ೪೭೪ ||

ದೇಹವ ತೊರೆಯುವ ನಿಶ್ಚಯವಿದ್ದಿತು
ಸುಗ್ರೀವನಾಗ ಎಂದನು ರಾಮನೆ
ಸೀತೆಯ ಕದ್ದಿಹ ರಾವಣ ಕಾಣಲು
ಬಿಟ್ಟನು ತಡೆಯಲು ಸಾಧ್ಯವು ಹೇಗದು || ೪೭೫ ||

ರಾಮನು ಅಂದನು ಆದುದು ಆಯಿತು
ನಿನ್ನಯ ಶಕ್ತಿಯ ರುಚಿಯನು ಕಂಡಿಹ
ರಾವಣ ತಿಳಿಯುವ ಕಪಿಬಲ ರೀತಿಯ
ಲಕ್ಷ್ಮಣ ವ್ಯೂಹದಿ ನಿಲ್ಲಿಸು ಸೇನೆಯ || ೪೭೬ ||

ಯುದ್ಧದ ಗಳಿಗೆಯು ಬರುತಿದೆ ಸನಿಹಕೆ
ಎನ್ನುತ ರಾಘವ ಇಳಿಯುತ ಗಿರಿಯಿಂ
ವೀಕ್ಷಣೆ ಮಾಡಿದ ಸೇನೆಯನೆಲ್ಲವ
ಯುದ್ಧದಿ ಸೆಣಸುವ ಆಜ್ಞೆಯ ಕೊಟ್ಟನು || ೪೭೭ ||

ರಾವಣ ಹಿಡಿಯುತ ಬಿಲ್ಲನು ಕೈಯಲಿ
ನಡೆದನು ಸೇನೆಯ ಮುಂದಕೆ ಆತನು
ಲಂಕೆಯ ದ್ವಾರವ ನೋಡುತ ನಡೆದರು
ರಾಮನು ನಿಂತನು ಉತ್ತರ ದ್ವಾರದಿ || ೪೭೮

ಜೊತೆಯಲಿ ಇದ್ದನು ಲಕ್ಷ್ಮಣ ಕೂಡಾ
ಮೈಂದ ದ್ವಿವಿದರು ಪೂರ್ವದ್ವಾರದಿ
ಅಂಗದ ಮುತ್ತಿದ ದಕ್ಷಿಣ ಬಾಗಿಲು
ಹನುಮನು ನಿಂತನು ಪಶ್ಚಿಮ ದ್ವಾರಕೆ || ೪೭೯ ||

ಜೊತೆಗೇ ಇದ್ದರು ಋಷಭ ಗಜ ಗವಯ
ಪ್ರಘಸ ಪ್ರಮಾಥಿ ಸುಗ್ರೀವ ವರರು
ಸೇನೆಯ ಮಧ್ಯದಿ ವಾಯುವ್ಯದಲಿ
ನಿಂತರು ಸುತ್ತಲು ಭದ್ರತೆಯಿಂದಲಿ || ೪೮೦ ||

ಲಂಕೆಯ ಸುತ್ತಲು ವಾನರ ಸೇನೆಯು
ಮುತ್ತಿತು ಒತ್ತುತ ಮಿಡತೆಯ ತೆರದಲಿ
ರಾಮನು ಯೋಚನೆ ಮಾಡುತ ಅಂದನು
ರಾಜಧರ್ಮದಲಿ ನಡೆಯುವ ಎಲ್ಲರು || ೪೮೧ ||

ಅಂಗದನು ಶ್ರೀರಾಮನ ದೂತನಾಗಿ ರಾವಣನ ಕಡೆಗೆ ಹೋಗುವದು

ಸಾಮೋಪಾಯವು ನೀತಿಯ ರೀತಿಯು
ಕಾರಣ ಕಳಿಸುವೆ ದೂತನ ಒಬ್ಬನ
ಎನ್ನುತ ಕರೆದನು ಅಂಗದ ಕುವರನ
ವತ್ಸನೆ ವೀರನೆ ನೀನೇ ಹೋಗುತ || ೪೮೨ ||

ರಾವಣ ರಾಜಗೆ ಎನ್ನಯ ಮಾತನು
ತಿಳಿಸಲು ಯೋಗ್ಯನು ನೀನೇ ಎನಿಸಿದೆ
ಕೋಟೆಯ ಹಾರುತ ಲಂಕೆಗೆ ಸಾಗುತ
ತಿಳಿಸೈ ಅವನಿಗೆ ಈ ಪರಿ ನೀನು || ೪೮೩ ||

## ಶ್ರೀರಾಮ ಸಂದೇಶ

ರಾವಣ ಬಂದಿದೆ ಸಮಯವು ನಿನಗೆ
ಪುಣ್ಯದ ಸಂಚಯ ಕರಗುತ ಬಂದಿದೆ
ಬ್ರಹ್ಮನ ವರದಿಂ ಸೊಕ್ಕಿಲಿ ಮಾಡಿದ
ಉದ್ಧಟ ಕಾರ್ಯದ ಫಲವನು ಉಣ್ಣುವೆ || ೪೮೪ ||

ನಿನ್ನನು ದಂಡನೆ ಮಾಡಲು ಬಂದಿಹ
ರಾಮನ ಬಿಲ್ಲೇ ಯಮದಂಡ ನಿನಗೆ
ಯುದ್ಧವ ಮಾಡದೆ ಸೀತೆಯ ಕದ್ದಿಹ
ಹೇಡಿಯೆ ತುಡುಗನೆ ಶಕ್ತಿಯ ತೋರಿಸು || ೪೮೫ ||

ರಾಕ್ಷಸಶ್ರೇಷ್ಠನು ವಿಭೀಷಣನೀಗ
ಎನ್ನಯ ಆಶ್ರಿತ ಲಂಕೆಯ ಆಳುವ
ಮುಗಿಯಿತು ಇಂದಿಗೆ ಲಂಕೆಯ ಭೋಗವು
ಶರಣನು ಆದರೆ ಉಳಿಯುವೆ ನೀನು || ೪೮೬ ||

ಇಲ್ಲದೆ ಹೋದರೆ ಕೊಲ್ಲುವೆ ನಿನ್ನನು
ಕಣ್ಣಿಗೆ ಬಿದ್ದಿಹೆ ಉಳಿಯುವದೆಂತು
ಹೆದರುತ ಹಕ್ಕಿಯು ಆಗುತ ಹೋದರು
ಮೂರೂ ಲೋಕದಿ ತಿರುಗಿದರೂ ಸಹ || ೪೮೭ ||

ನಿನ್ನನು ಎಂದೂ ಉಳಿಸೆನು ತಿಳಿದಿರು
ನಿನ್ನಯ ಪ್ರಾಣವು ಎನ್ನಯ ಕೈಯಲಿ
ಕೇಳುತ ಈ ನುಡಿ ಅಂಗದ ನೆಗೆದನು
ಇಳಿದನು ಒಳಗಡೆ ರಾವಣನೆದುರಿಗೆ || ೪೮೮ ||

ಸಚಿವರ ಸಂಗಡ ಕುಳಿತಿಹ ರಾವಣ
ಕಾಣುತ ಕಪಿಯನು ಏನಿದು ಎಂದನು
ಅಂಗದನಾಗಲೆ ಹೇಳಿದನೆಲ್ಲವ
ರಾಮನು ಹೇಳಿದುದೆಲ್ಲವ ಬಿಡದಲೆ || ೪೮೯ ||

### ಅಂಗದನ ಹೇಳಿಕೆ

ಅಲ್ಲದೆ ಹೇಳಿದ ಹೆಚ್ಚಿಗೆ ಇನ್ನೂ
ರಾಮನ ದೂತನು ವಾಲಿಯ ತನಯನು
ಅಂಗದ ಕುವರನು ಎನ್ನಯ ನಾಮವು
ರಾಮನು ಬಂದಿಹ ನಿನ್ನನು ಕೊಲ್ಲಲು || ೪೯೦ ||

ಸೀತೆಯ ಒಪ್ಪಿಸಿ ಶರಣನು ಆದರೆ
ಉಳಿಸುವ ನಿನ್ನಯ ಜೀವವ ಆತನು
ಇಲ್ಲದೆ ಹೋದರೆ ಮಲಗುವೆ ರಣದಲಿ
ಮುಕ್ಕುತ ಮಣ್ಣನು ಮಕ್ಕಳ ಸಹಿತದಿ || ೪೯೧ ||

ಕೇಳುತ ಈ ನುಡಿ ಕೆರಳಿದ ರಾವಣ
ಕಣ್ಣಿನ ಕಿಡಿಗಳ ಉದುರಿಸಿ ಎದ್ದನು
ಹಿಡಿಯಿರಿ ಕಪಿಯನು ಈಗಲೆ ನೀವು
ಎನ್ನಲು ಹಿಡಿದರು ನಾಲ್ವರು ಅವನನು || ೪೯೨ ||

ಕೊಚ್ಚಿರಿ ಕೊಲ್ಲಿರಿ ಈಗಲೆ ಕಪಿಯನು
ಎನ್ನುವ ಮಾತನು ಕೇಳುತ ಅಂಗದ
ಗಗನಕೆ ನೆಗೆದನು ನಾಲ್ವರ ಸಂಗಡ
ಮೇಲಕೆ ಹೋಗುತ ಕೈಗಳ ಕೊಡವುತ || ೪೯೩ ||

ಕೆಡವಿದ ನಾಲ್ವರು ರಾಕ್ಷಸರಾಗಲೆ
ಬಿದ್ದರು ಧೊಪ್ಪನೆ ರಕ್ತವ ಕಾರುತ
ಅಂಗದನಿರುತಿಹೆ ವಾಲಿಯ ತನಯನು
ಎನ್ನುತ ಒಡೆದನು ಅರಮನೆ ಕಳಸವ || ೪೯೪ ||

ಉರುಳಿತು ಬಿದ್ದಿತು ಕೆಳಗಡೆ ಕಳಸವು
ರಕ್ಕಸರೆಲ್ಲರು ನೋಡುತಲಿದ್ದರು
ಮಾಡದೆ ಏನೂ ತಿಳಿಯದೆ ಒಂದೂ
ಅಂಗದ ಹಾರಿದ ಕೋಟೆಯ ಹೊರಗಡೆ || ೪೯೫ ||

ಅಂಗದ ತಿಳಿಸಿದ ಸುದ್ದಿಯನರಿಯುತ
ರಾಮನು ಅಂದನು ಯುದ್ಧವೆ ಮಾರ್ಗವು
ಬೇರೆಯ ವಿಧಾನವೆಲ್ಲವು ಮುಗಿಯಿತು
ಲಗ್ಗೆಗೆ ಸಿದ್ಧರು ಆಗಿರಿ ಎಲ್ಲರು || ೪೯೬ ||

**ಆಕ್ರಮಣಕ್ಕೆ ಶ್ರೀರಾಮನ ಆಜ್ಞೆ**

ರಾಮನ ಆಜ್ಞೆಯು ಬಂದಿತು ಕೊನೆಗೆ
ಕೋಟೆಯ ಗೋಡೆಯ ಹತ್ತಲು ಒಡೆಯಲು
ಕೂಡಲೆ ವಾನರವೀರರು ತಂದರು
ಪರ್ವತ ಶಿಖರದ ಮಣ್ಣನು ಕಲ್ಲನು || ೪೯೭ ||

ಹಾಕುತ ಮುಚ್ಚಿದರೆಲ್ಲೆಡೆ ಕಂದಕ
ಲಗ್ಗೆಯ ಹತ್ತುತ ಏರಿದರೆಷ್ಟೋ
ರಾವಣನಾಜ್ಞೆಯ ಹೊಂದಿದ ರಕ್ಕಸ
ವೀರರು ಬಂದರು ಕೋಟೆಯ ಹೊರಗಡೆ || ೪೯೮ ||

ನಡೆಯಿತು ಯುದ್ಧವು ಭೀಕರವಾಗುತ
ಜಯಜಯಕಾರವು ಗರ್ಜನೆ ಕೂಡಾ
ತುಂಬಿದವೆಲ್ಲೆಡೆ ಬುವಿಯಲಿ ನಭದಲಿ
ಆಯುಧ ಸಪ್ಪಳ ಮುಚ್ಚಿತು ಕಿವಿಯನು ‖ ೪೯೯ ‖

ಶಂಖದ ಧ್ವನಿಯೂ ಭೇರಿಯ ಮೊಳಗೂ
ಸಾಯುವ ಹೊಡೆಯುವ ಚೀರುವ ದನಿಗಳು
ಕರ್ಕಶವಾಯಿತು ಕೇಳಲು ಎಲ್ಲೆಡೆ
ರಕ್ತವು ಮಾಂಸವು ಚಿಮ್ಮಿತು ಸುತ್ತಲು ‖ ೫೦೦ ‖

ಆನೆಯ ಕುದುರೆಯ ಏರಿದ ರಕ್ಕಸ
ವೀರರು ನುಗ್ಗುತ ಬಂದರು ಮುಂದಕೆ
ಕಲ್ಲಿನ ಬಂಡೆಯ ಗಿಡಗಳ ಹಿಡಿದಿಹ
ವಾನರವೀರರು ಮುತ್ತುತಲಿದ್ದರು ‖ ೫೦೧ ‖

## ಕದನ ಪ್ರಾರಂಭ

ಅಂಗದ ಕಾದಿದ ಇಂದ್ರಜಿತನೊಡನೆ;
ಸಂಪಾತಿ ಕಾದಿದ ಪ್ರಜಂಘನೊಡನೆ
ಮಿತ್ರಘ್ನನೊಡನೆ ವಿಭೀಷಣ ನಿಂತ
ಅಲ್ಲಿಯೆ ತಪನನು ತಡೆದನು ಗಜನು ‖ ೫೦೨ ‖

ನೀಲನು ತಡೆದನು ನಿಕುಂಭನನ್ನೂ
ಸುಗ್ರೀವನಿಗೋ ಪ್ರಘಸನು ಬಂದನು
ಲಕ್ಷ್ಮಣ ತಡೆದನು ವಿರೂಪಾಕ್ಷನನು
ರಾಮನು ತಡೆದನು ನಾಲ್ವರು ದೈತ್ಯರ ‖ ೫೦೩ ‖

ಅಗ್ನಿಕೇತುವನು ರಶ್ಮಿಕೇತುವನು
ಹಾಗೂ ಸುಪ್ತಘ್ನ ಯಜ್ಞಕೋಪರನು
ಮೈಂದ ದ್ವಿವಿದರ ಎದುರಿಗೆ ಬಂದರು
ವಜ್ರಮುಷ್ಟಿಯೂ ಅಶನಿಪ್ರಭನೂ ॥ ೫೦೪ ॥

ಪ್ರತಪನು ಕಾದಿದ ನೀಲನ ಜೊತೆಗೆ
ಸುಷೇಣ ಹೊಡೆದನು ವಿದ್ಯುನ್ಮಾಲಿಗೆ
ಯುದ್ಧದ ಪ್ರಖರತೆ ಹೆಚ್ಚಿತು ಕ್ಷಣಕ್ಷಣ
ನೆತ್ತರ ಕೋಡಿಯು ಹರಿಯಿತು ಸುತ್ತಲು ॥ ೫೦೫ ॥

ರಕ್ಕಸವೀರರ ಸೀಳುತ ನಡೆದಿಹ
ಅಂಗದ ವೀರನ ನೋಡುತ ಕುವರನು
ಹೊಡೆದನು ಅವನಿಗೆ ಗದೆಯಿಂ ಕೂಡಲೆ
ರಥವನು ಮುರಿಯುತ ಅಂಗದನಾಗಲೆ ॥ ೫೦೬ ॥

ಕೊಂದನು ಸಾರಥಿ ಹಯಗಳ ಸಹಿತದಿ
ಪ್ರಜಂಘ ಬಿಟ್ಟಿಹ ಬಾಣವ ತಡೆಯುತ
ಸಂಪಾತಿ ಕೊಂದನು ಮರದಿಂ ಹೊಡೆಯುತ
ಜಂಬುಮಾಲಿಯುದು ಶಕ್ತಿಯ ಆಯುಧ ॥ ೫೦೭ ॥

ಮಾಡಿತು ಗಾಯವ ಹನುಮನ ಎದೆಗೆ
ಕೂಡಲೆ ನೆಗೆಯುತ ಕೊಲ್ಲುತ ಅವನನು
ಪುಡಿಪುಡಿ ಮಾಡಿದ ರಥವನು ಆಗಲೆ
ನಳನೋ ಕಿತ್ತನು ಪ್ರತಪನ ಕಣ್ಗಳ ॥ ೫೦೮ ॥

ತಪನನು ಕೊಂದನು ಗುದ್ದುತ ಗಜನೂ
ಪಿತೃಘ್ನನಾಗ ಬಿಡುತಲಿ ಬಾಣವ
ಗಾಯವ ಮಾಡಿದ ವಿಭೀಷಣ ದೊರೆಗೆ
ಗದೆಯಿಂ ಹೊಡೆಯುತ ವಿಭೀಷಣನಾಗ || ೫೦೯ ||

ಒಡೆದನು ತಲೆಯನು ಬಿದ್ದನು ವೈರಿಯು
ಪ್ರಘಸನು ಸತ್ತನು ಸುಗ್ರೀವನಿಂದ
ವಿರೂಪ ಮಡಿದನು ಲಕ್ಷ್ಮಣನಂಬಿಗೆ
ರಾಮನು ತರಿದನು ನಾಲ್ವರ ಶಿರಗಳ || ೫೧೦ ||

ಪ್ಯಂದನ ಹೊಡೆತಕೆ ಬಿದ್ದನು ದೈತ್ಯನು
ನಿಕುಂಭ ಬಿಡುತಲಿ ಬಾಣದ ಜಾಲವ
ಗಾಸಿಯು ಮಾಡಿದ ನೀಲನ ಅತಿಶಯ
ಹಾಗೆಯೆ ಕೂಗುತಲಿದ್ದನು ಆತನು || ೫೧೧ ||

ಕೊನೆಯಲಿ ತಡೆಯದೆ ನೀಲನು ಜಿಗಿಯುತ
ರಕ್ಕಸವೀರನ ರಥವನು ಮುರಿಯುತ
ಗಾಲಿಯು ಕಿತ್ತುತ ಆಯುಧ ಮಾಡುತ
ಹೊಡೆಯುತ ಒಡೆದನು ನಿಕುಂಭ ಶಿರವನು || ೫೧೨ ||

ಹಾಗೆಯೆ ಕೊಲ್ಲುತ ಸಾರಥಿ ಕುದುರೆಯ
ಮಾಡಿದ ಗರ್ಜನೆ ತಿಳಿಸಲು ಎಲ್ಲೆಡೆ
ದ್ವಿವಿಧನ ಅಶನಿಪ್ರಭರದು ಯುದ್ಧವು
ಆಯಿತು ಘೋರವು ಕ್ರೂರವು ಕೂಡಾ || ೫೧೩ ||

ಮೈಯಲಿ ಆಗಿಹ ಗಾಯವ ನೋಡದೆ
ರಥವನು ಪುಡಿಪುಡಿ ಮಾಡುತ ಆತನು
ಕೊಂದನು ಸಾರಥಿ ರಕ್ಕಸ ವೈರಿಯು
ಬಿದ್ದನು ಕೆಳಗಡೆ ಅಶನಿಪ್ರಭನೂ ॥ ೫೧೪ ॥

ವಿದ್ಯುನ್ಮಾಲಿಯ ಬಾಣದ ಏಟಿಗೆ
ಜರ್ಜರನಾಗುವ ಸುಷೇಣನನ್ನು
ನೋಡುತ ಗರ್ಜನೆ ಮಾಡುವ ಅವನನು
ಸುಷೇಣನಿಕ್ಕಿದ ರಥವನು ಮುರಿದು ॥ ೫೧೫ ॥

ಕೂಡಲೆ ರಕ್ಕಸ ಮೇಲಕೆ ನೆಗೆಯುತ
ಬಂದನು ಎದುರಿಗೆ ಗದೆಯನು ಹಿಡಿಯುತ
ಏಟನು ಕೊಟ್ಟನು ಸುಷೇಣನ ಎದೆಗೆ
ಸುಷೇಣ ಹೊಡೆದನು ಬಂಡೆಯ ತೂರುತ ॥ ೫೧೬ ॥

ಪೆಟ್ಟಿನ ಹೊಡೆತಕೆ ಜಜ್ಜಿತು ಎದೆಯು
ಉರುಳಿದ ದೈತ್ಯನು ಪ್ರಾಣವ ತೊರೆಯುತ
ಕಂಡಿತು ಎಲ್ಲೆಡೆ ರಕ್ತದ ಕೊಚ್ಚೆಯು
ಮುರಿದಿಹ ರಥಗಳು ಆಯುಧ ಅವಯವ ॥ ೫೧೭ ॥

ಆಗಲೆ ಮುತ್ತಿತು ಸಂಜೆಯ ಕತ್ತಲು
ಸಾಗಿತು ಯುದ್ಧವು ಕತ್ತಲೆಯಲ್ಲಿಯೆ
ಭೇರಿಯ ಘೋಷವು ಮೃದಂಗ ಧ್ವನಿಯು
ಮದ್ದಳೆ ಗದ್ದಲ ಶಂಖದ ಕೂಗು ॥ ೫೧೮ ॥

ಕೇಳುತಲಿದ್ದಿತು ಎಲ್ಲೆಡೆ ಆಗ
ರಾಮನ ಶರಗಳ ಮಿಂಚದು ಹೊಳೆದು
ಕೆಡವಿತು ಎಲ್ಲೆಡೆ ಬೆಳಕನು ಆಗಲೆ
ಅಂಗದ ವೀರನು ಯುದ್ಧದಿ ಮೀರಿದ || ೫೧೯ ||

ಇಂದ್ರಜಿತುವಿನ ಮಾಯಾ ಯುದ್ಧ
ತಡೆಯದೆ ಅಂಗದ ಹೊಡೆತವ ರಕ್ಕಸ
ಎಲ್ಲರು ಕೂಗುತ ಓಡಿದರೆಲ್ಲೆಡೆ
ಇಂದ್ರಜಿತು ಕುವರ ಕೂಡಾ ತಡೆಯದೆ
ಆದನು ಆತನು ಅದೃಶ್ಯನಾಗ || ೫೨೦ ||

ಕಾಣದೆ ಯುದ್ಧವ ಮಾಡುವ ವರದ
ಸಿದ್ಧಿಯು ಇದ್ದಿತು ಅವನಿಗೆ ನಿಜಕೂ
ಬ್ರಹ್ಮನು ಕೊಟ್ಟಹ ವರದಲಿ ಬಲಯುತ
ಕಣ್ಣಿಗೆ ಕಾಣದೆ ಶರಗಳ ಬಿಟ್ಟನು || ೫೨೧ ||

ಸಿಡಿಲಿನ ತೆರದಲಿ ಬಂದವು ಅವುಗಳು
ಸರ್ಪಾಸ್ತ್ರಗಳನು ಬಿಡುತಲಿ ಆತನು
ಭೇದಿಸತೊಡಗಿದ ರಾಮಲಕ್ಷ್ಮಣರ
ಮಾಯಾ ಬಲವದು ದಿಗ್ಭ್ರಮೆಗೊಳಿಸಿತು || ೫೨೨ ||

ಸರ್ಪಾಸ್ತ್ರಗಳಿಂದ ರಾಮ ಲಕ್ಷ್ಮಣರ ಬಂಧನ
ಕಾಣರು ಅವನನು ಎಲ್ಲಿಯೂ ಅವರು
ಸರ್ಪಾಸ್ತ್ರಗಳೋ ಕಟ್ಟುತ ಅವರನು
ಪರವಶರಾಗುತ ಬಿದ್ದರು ಇಬ್ಬರು
ಕಾಣುತ ಈ ಪರಿ ಕಳವಳ ಬೆಳೆಯಿತು || ೫೨೩ ||

ರಾಮನು ಅಂದನು ಕಣ್ಣಿಗೆ ಕಾಣದೆ
ಮಾಯಾಯುದ್ಧವ ಮಾಡುತಲಿರುವನು
ಗಗನದಿ ಶರಗಳು ಬರುತಲೆ ಇರುವವು
ಗಗನದಿ ಇರುತಿಹ ತಾಣವ ಶೋಧಿಸಿ ‖ ೫೩೪ ‖

ಎನ್ನುತ ಕಳಿಸಿದ ಅಂಗದ ಜಾಂಬವ
ಶರಭ ನೀಲರನು ವಿನತ ಋಷಭರನು
ಅಲ್ಲದೆ ಇನ್ನೂ ಕೆಲವರು ವೀರರ
ರಕ್ಕಸ ನಿಂತಿಹ ತಾಣವ ತಿಳಿಯಲು ‖ ೫ ೫ ‖

ವಾನರವೀರರು ನೆಗೆದರು ಗಗನದಿ
ತಿರುಗಿದರೆಲ್ಲೆಡೆ ತಿಳಿಯದು ಅವರಿಗೆ
ಶರಗಳ ಹೊಡೆತಕೆ ಜರ್ಜರರಾದರು
ರಾಮ-ಲಕ್ಷ್ಮಣರ ದೇಹಕೆ ಗಾಯಗಳು ‖ ೫೩೬ ‖

ಹಾಗೆಯೆ ಕೂಗುತ ಹೇಳಿದ ಗಗನದಿ
ಅದೃಶ್ಯವಾಗಿ ಯುದ್ಧವ ಮಾಡಲು
ದೇವೇಶ್ವರನಿಹ ಇಂದ್ರನು ಕೂಡಾ
ನೋಡಲು ಆರನು ಬಾರನು ಸಮೀಪ ‖ ೫೩೭ ‖

ಎನ್ನಯ ಶರಗಳ ವೈಖರಿ ನೋಡಿರಿ
ಕಳಿಸುವೆ ನಿಮ್ಮನು ಯಮಪುರಿ ನೋಡಲು
ಎನ್ನುತ ಬಿಟ್ಟನು ನಿಶಿತಾಸ್ತ್ರಗಳನು
ಗಾಯವ ಮಾಡುತ.ಗರ್ಜನೆ ಮಾಡಿದ ‖ ೫೩೮ ‖

ಶರಗಳ ಹೊಡೆತಕೆ ಬಂಧುಗಳಿಬ್ಬರು
ಬಿದ್ದವರಾದರು ಪ್ರಜ್ಞೆಯು ತಪ್ಪಿತು
ನಾಗಪಾಶದಲಿ ಬಂಧಿತರಾಗಿಹ
ಅವರನು ನೋಡುತ ವಾನರರೆಲ್ಲರು ॥ ೫೨೯ ॥

ಕಳವಳದಿಂದಲಿ ಬಂದರು ಎಲ್ಲರು
ಕಪಿವರರಲ್ಲದೆ ವಿಭೀಷಣ ಕೂಡ
ಕಾಣನು ವೈರಿಯು ಯಾರಿಗು ಅವರಿಗೆ
ವಿಭೀಷಣ ಮಾತ್ರ ತಿಳಿದನು ಮಾಯೆಯು ॥ ೫೩೦ ॥

ಮಾಯೆಯ ಪರದೆಯ ಹರಿಯುತ ಆತನು
ನೋಡಿದ ಗಗನದಿ ನಿಂತಿಹ ಕುವರನ
ಗರ್ಜನೆ ಮಾಡುತ ಯುದ್ಧದ ಮಾಡುವ
ತೇಜಸಿ ವೀರನು ಅಸೀಮ ಶೂರನು ॥ ೫೩೧ ॥

**ಇಂದ್ರಜಿತುವಿನಿಂದ ಹೆಗ್ಗಳಿಕೆ**

ರಾಮ ಲಕ್ಷ್ಮಣರ ನೋಡುತ ಆಗಲೆ
ಇಂದ್ರಜಿತುವಾಗ ಅಂದನು ಈ ಪರಿ
ರಾಕ್ಷಸ ಭಟರೇ ನೋಡಿರಿ ಎಲ್ಲರು
ಖರದೂಷಣರನು ಕೊಲ್ಲುತ ತಿಳಿದರು ॥ ೫೩೨ ॥

ತಾವೇ ಶೂರರು ಎನ್ನುತ ಮೆರೆದರು
ನಾಗಪಾಶದಲಿ ಕಟ್ಟಿಹೆ ಇವರನು
ಬಿಡಿಸಲು ಯಾರಿಗು ಸಾಧ್ಯವೆ ಇಲ್ಲವು
ಋಷಿಗಳು ಸಂಘವ ಮಾಡುತ ಬರಲಿ ॥ ೫೩೩ ॥

ದೇವದಾನವರೆ ಬಂದರು ಬರಲಿ
ಬಿಡಿಸಲು ಸಾಧ್ಯವೆ ಇಲ್ಲವು ಇವರನು
ಎನ್ನಯ ತಂದೆಯ ಚಿಂತೆಯು ಹರಿಯಿತು
ಬಿಂಕದ ಲಂಕೆಯ ಕಳಂಕ ಹೋಯಿತು. || ೫೩೪ ||

ಸಾಗರ ಸೇತುವೆ ಕಟ್ಟುತ ಬಂದಿಹ
ಸಾಹಸವೆಲ್ಲವು ಕರಗಿತು ಆಗಲೆ
ಹಾಗೆಯೆ ಬಿಡುತಲಿ ಶರಗಳ ಕೆಲವು
ಗಾಯವ ಮಾಡಿದ ಕಪಿವರರಿಗೆ ಅವ || ೫.೩೫ ||

ಪ್ರಜ್ಞೆಯು ಇಲ್ಲದೆ ಬಿದ್ದಿಹ ಅವರನು
ಕಾಣುತ ತಿಳಿದನು ಸತ್ತಿಹರೆಂತೆನೆ
ಗರ್ಜನೆ ಮಾಡುತ ರಕ್ಕಸರೊಡನೆಯೆ
ಮರಳುತ ಹೊಕ್ಕನು ಲಂಕೆಯ ಒಳಗಡೆ || ೫೩೬ ||

ವಾನರ ವೀರರ ಕಳವಳ

ವಾನರವೀರರು ಸುಗ್ರೀವ ಕೂಡ
ಶೋಕದಿ ದೈನ್ಯದಿ ಕಳವಳದಿಂದಲಿ
ನಿಂತರು ಸುತ್ತಲು ನೋಡುತ ಅವರನು
ವಿಭೀಷಣನಾಗ ಅಂದನು ಈ ಪರಿ || ೫೩೭ ||

ಯುದ್ಧದಿ ಈ ಪರಿ ಸಾಮಾನ್ಯವಿಹುದು
ಒಮ್ಮೆಲೆ ಜಯವದು ಬಾರದು ಎಂದೂ
ಎಮ್ಮಯ ಭಾಗ್ಯವು ಒಳ್ಳೆಯದಿದ್ದರೆ
ಚೇತನ ಹೊಂದುತ ಏಳುವರೀರ್ವರು || ೫೩೮ ||

ಧೈರ್ಯವು ಸಹನೆಯು ಸಾಧನವೆಮಗೆ
ಅಪಾರ ಶೂರರು ಇರುವರು ಈರ್ವರು
ಕಳವಳ ಸಲ್ಲದು ವೀರನಿಗೆಂದಿಗು
ಸೇನೆಯ ಹಿತವನು ಲಕ್ಷಿಸು ಮೊದಲಿಗೆ || ೫೩೯ ||

ಎಚ್ಚರ ತಿಳಿಯುವ ವರೆಗೂ ನೀನು
ಇಲ್ಲಿಯೆ ಇರುತಲಿ ರಕ್ಷಣೆ ಮಾಡು
ರಾಮನು ಎಂದೂ ಪ್ರಾಣವ ತೊರೆಯನು
ಚೇತನ ಹೊಂದುವ ನಿಶ್ಚಯ ತಿಳಿ ನೀ || ೫೪೦ ||

ಮುಖದಲಿ ಕಾಂತಿಯು ಇರುವದು ಇನ್ನೂ
ವಾನರ ಸೇನೆಗೆ ಧೈರ್ಯವ ಹೇಳುತ
ವಿರಾಮ ಹೊಂದಲು ಅಪ್ಪಣೆ ಕೊಡು ನೀ
ಕುಳಿತರು ಎಲ್ಲರು ಇಬ್ಬರ ಸುತ್ತಲು || ೫೪೧ ||

ಇಂದ್ರಜಿತುವಿನಿಂದ ತಂದೆಗೆ ಯುದ್ಧವ ವರದಿ

ಇಂದ್ರಜಿತುವಾಗ ಗರ್ಜನೆ ಮಾಡುತ
ಹೋದನು ತಂದೆಯ ಅರಮನೆಯೊಳಗಡೆ
ಮಣಿಯುತ ಪಾದಕೆ ಅಂದನು ಆತನು
ತಂದೆಯೆ ಕೊಂದೆನು ರಾಮ ಲಕ್ಷ್ಮಣರ || ೫೪೨ ||

ಎನ್ನಲು ಪುಟಿಯುತ ಎದ್ದನು ರಾವಣ
ಅಪ್ಪಿದ ಪ್ರೀತಿಯ ಮಗನನು ಆಗಲೆ
ಕೇಳಿದ ಯುದ್ಧದ ವಿವರವ ಎಲ್ಲವ
ನಾಗಪಾಶದಲಿ ಬಂಧಿತರಾಗಿಹ || ೫೪೩ ||

ಸಂತಸ ಉಕ್ಕಿತು ರಾವಣ ಮನದಲಿ
ಹರಸುತ ಮಗನನು ಕಳಿಸಿದನವನನು
ಇತ್ತಲು ವಾನರವೀರರು ಎಲ್ಲರು
ಸೇನೆಯ ನಿಲ್ಲಿಸಿ ವ್ಯವಸ್ಥೆಯಿಂದಲಿ || ೫೪೪ ||

ಕಾಯುತ ನಿಂತರು ದಿಕ್ಕುಗಳೆಲ್ಲವ
ಏನೇ ಸಪ್ಪುಳ ಬಂದರು ಕೂಡಾ
ತಿಳಿಯುವರೆಲ್ಲರು ರಕ್ಕಸಮಾಯೆಯು
ವಾನರ ಸೈನ್ಯದಿ ತುಂಬಿತು ಶೋಕವು || ೫೪೫ ||

ತ್ರಿಜಟೆಗೆ ರಾವಣನ ಆದೇಶ

ಸೀತೆಯ ಕಾಯುತ ಕುಳಿತಿಹ ತ್ರಿಜಟೆಯ
ರಾವಣ ಕರೆಸಿದ ಆಗಲೆ ಅಲ್ಲಿಗೆ
ತಿಳಿಸೆಲೆ ಸೀತೆಗೆ ರಾಮನ ಮರಣವ
ಇಂದ್ರಜಿತು ಕುವರ ಕೊಂದಿಹನಾತನ || ೫೪೬ ||

ಪುಷ್ಪಕ ವಿಮಾನದೊಳಗಡೆ ಕೂಡಿಸಿ
ಒಯ್ಯಿರಿ ಸೀತೆಯ ರಣರಂಗದೊಳಗೆ
ತೋರಿಸಿ ಅವಳಿಗೆ ರಾಮ ಲಕ್ಷ್ಮಣರ
ಅಸುವನು ತೊರೆಯುತ ಬಿದ್ದಿಹ ಅವರನು || ೫೪೭ ||

ಯಾವನ ಶಕ್ತಿಯ ನಂಬುತ ಸೊಕ್ಕಿನ
ಮಾತನು ಆಡುವ ಸೀತೆಯು ನೋಡಲಿ
ಯುದ್ಧದಿ ಆಸುವನು ನೀಗಿದ ಪರಿಯನು
ಈಗಲು ಆದರು ಒಪ್ಪಲಿ ಎನ್ನನು || ೫೪೮ ||

ಹಾಗೆಯೆ ಆಗಲಿ ಎನ್ನುತ ರಕ್ಕಸಿ
ಒಯ್ದಳು ಸೀತೆಯ ಪುಷ್ಪಕದಲ್ಲಿಯೆ
ಯುದ್ಧದ ಭೂಮಿಗೆ ತೋರಲು ಅವರನು
ವೈರಿಯು ಕೊಂದುದ ಡಂಗುರ ಹೊಡೆಸಿದ ॥ ೫೪೯ ॥

ಸೀತೆಯು ಕಂಡಳು ರಾಕ್ಷಸ ಸಂಭ್ರಮ
ವಾನರದೇಹಗಳೆಲ್ಲೆಡೆ ಬಿದ್ದುದ
ರಾಮ ಲಕ್ಷ್ಮಣರ ದೇಹಗಳ ಕಂಡು
ನೋಡಿದಳಾಗಲೆ ಒಡೆದಿಹ ಕವಚವ ॥ ೫೫೦ ॥

ದೇಹದಿ ನಾಟಿದ ಬಾಣದ ಏಟಿಗೆ
ನೆತ್ತರು ಇದ್ದಿತು ಗಾಯದ ಬಾಯಿಗೆ
ಸುತ್ತಲು ಕಂಡರು ಕಪಿವರರೆಲ್ಲರು
ಶೋಕವ ಮಾಡುತ ಕುಳಿತಿಹರೆಲ್ಲರು ॥ ೫೫೧ ॥

## ಸೀತೆಯು ಕಳವಳ

ಕಾಣುತ ಈ ಪರಿ ಉಕ್ಕಿತು ದುಃಖವು
ಜ್ಯೋತಿಷ ತಜ್ಞರು ಹೇಳಿದ ಎಲ್ಲವು
ಸಟೆಯದು ಆಯಿತೆ ಏನಿದು ಕಾಲವು
ಪೃಥ್ವೀಪತಿಯೆ ನಿನ್ನಯ ಪತಿಯು ॥ ೫೫೨ ॥

ಇರುತಿಹೆ ನಿಜಕೂ ಭಾಗ್ಯಶಾಲಿನಿಯು
ಎನ್ನುವ ಮಾತದು ಸುಳ್ಳೇ ಆಯಿತು
ಸಾಯುವ ವರೆಗೂ ಸುಮಂಗಲೆಯಾಗಿ
ಇರುವೆನು ಎನ್ನುವ ಮಾತೂ ಸಟೆಯೇ ॥ ೫೫೩ ॥

ಚಕ್ರವರ್ತಿಯಿಹ ರಾಮನ ಪತ್ನಿಯು
ಆಗುವಿ ಎನ್ನುವ ನುಡಿಯೂ ಸಟಿಯೇ
ಎನ್ನುತ ರೋದನ ಮಾಡುವ ಸೀತೆಗೆ
ತ್ರಿಜಟೆಯು ಅಂದಳು ಸಾಂತ್ವನಗೊಳಿಸಲು || ೩೩೪ ||

ಸೀತೆಯೆ ಶೋಕವು ಕೂಡದು ಈಗಲೆ
ನಿನ್ನಯ ಗಂಡನು ಬದುಕಿಯೆ ಇರುವನು
ವಾನರ ಮುಖದಲಿ ಕ್ರೋಧವು ಕಾಣದು
ಕಾರಣ ಅನ್ನುವೆ ರಾಮನು ಬದುಕಿಹ || ೩೩೫ ||

ನಾಯಕ ಸತ್ತರೆ ಸೇನೆಯು ಎಲ್ಲಾ
ಶೋಕದಿ ಮುಳುಗುತ ಓಡುವದೆಲ್ಲೆಡೆ
ಅಲ್ಲದೆ ತಿಳಿದಿರು ಪುಷ್ಪಕವಿದುವೇ
ವಿಧವೆಯ ಎಂದಿಗು ಹೊರುವದೆ ಇಲ್ಲಾ || ೩೩೬ ||

ವಾನರ ಸೇನೆಯು ಸಿದ್ಧತೆ ನೋಡು
ನಾಯಕ ಮಡಿದಿಹ ಲಕ್ಷಣ ಕಾಣದು
ಮೂರ್ಛಿತರಾಗಿಹ ಲಕ್ಷಣ ನೋಡು
ಮರಣದ ಛಾಯೆಯು ಇಲ್ಲವೆ ಇಲ್ಲಾ || ೩೩೭ ||

ಮೈಥಿಲಿ ಮುಗಿಯುತ ಕೈಯ್ಗಳ ಅಂದಳು
ನಿನ್ನಯ ನುಡಿಯಲಿ ಅಮೃತ ತುಂಬಿದೆ
ನಿನ್ನಯ ಮಾತೇ ನಿಜವದು ಆಗಲಿ
ಆಗಲೆ ತಿರುಗಿತು ಪುಷ್ಪಕ ಲಂಕೆಗೆ || ೩೩೮ ||

ಬಿಟ್ಟರು ಸೀತೆಯ ಅಶೋಕವನದಲಿ
ಕಣ್ಣಿಗೆ ಕಟ್ಟಿದ ಚಿತ್ರವು ಮಾತ್ರವೆ
ಇರುವದು ಅದುವೇ ಇಬ್ಬರು ಬಿದ್ದುದು
ಸೀತೆಯ ಕಣ್ಣಲಿ ಕಂಬನಿ ತುಂಬಿದೆ || ೫೫೯ ||

### ನಾಗಪಾಶದಿಂದ ಶ್ರೀರಾಮನ ವಿಮೋಚನೆ ಹಾಗೂ ಶೋಕ

ನಾಗಪಾಶದಲಿ ಬಂಧಿತನಾಗಿಯೂ
ರಾಮನು ಎದ್ದನು ಮೂರ್ಛೆಯ ಕಳೆಯುತ
ಅಸಮ ಸ್ಥೈರ್ಯದ ಸತ್ವದ ಬಲದಿಂ
ಕಂಡನು ಬದಿಯಲಿ ಲಕ್ಷ್ಮಣ ಬಿದ್ದುದ || ೫೬೦ ||

ರಾಮನ ಶೋಕವು ಮೇರೆಯ ಮೀರಿತು
ತಮ್ಮನ ರಕ್ಷಣೆ ಆಗದೆ ಹೋಯಿತು
ತಾಯಿಗೆ ಮುಖವನು ತೋರಿಸಲಾರೆನು
ನಾನೂ ಹೋಗುವೆ ತಮ್ಮನ ಹಿಂದೆಯೆ || ೫೬೧ ||

ಒಂದೇ ವೇಳೆಗೆ ಸಾವಿರ ಶರಗಳ
ಹೊಡೆಯುವ ಶಕ್ತಿಯು ಇದ್ದಿತು ಅವನಲಿ
ಕಾರ್ತವೀರ್ಯನಿಗೆ ಶೌರ್ಯದಿ ಮಿಗಿಲು
ಇಂದ್ರನ ಅಸ್ತ್ರಗಳೆಲ್ಲವ ಮುರಿಯುವ || ೫೬೨ ||

ಇಂತಹ ತಮ್ಮನು ರಣದಲಿ ಮಲಗಿಹ
ಸುಗ್ರೀವರಾಜ ಈಗಲೆ ಹೊರಡು
ವಾನರಸೇನೆಯ ಸಹಿತದಿ ಹೋಗು
ಎಮ್ಮಯ ಮರಣದ ಸುದ್ದಿಯ ಕೇಳುತ || ೫೬೩ ||

ರಾವಣ ಬರುವನು ಅಟ್ಟುತ ನಿಮ್ಮನು
ಹೋಗಿರಿ ಎಲ್ಲರು ಕಿಷ್ಕಿಂಧೆಗೀಗ
ಅಪ್ಪಣೆ ಕೊಟ್ಟಿಹೆ ನಿಮಗೆಲ್ಲರಿಗೂ
ಹೋಗಲು ತಡೆಯೋ ಬಾಧೆಯು ಇಲ್ಲವು || ೫೬೪ ||

ವಿಭೀಷಣನನ್ನು ರಾಜನ ಮಾಡುವ
ಎನ್ನಯ ಮಾತದು ಸಟೆಯೋ ಆಯಿತು
ವಾನರವೀರರ ಹನುಮನ ಸಾಹಸ
ಮೆಚ್ಚಿಹೆ ನಿಜಕೂ ಹೋಗಿರಿ ಎಲ್ಲರು || ೫೬೫ ||

**ಸುಗ್ರೀವನ ಉತ್ತರ**

ಎನ್ನುತ ಶೋಕಿಪ ರಾಮನ ಕಾಣುತ
ಸುಗ್ರೀವನೆಂದ ಸುಷೇಣ ಮಾವನೆ
ರಾಮ ಲಕ್ಷ್ಮಣರ ಒಯ್ಯುತ ನೀನು
ಈಗಲೆ ಹೋಗೈ ಕಿಷ್ಕಿಂಧೆಗೆ ನೀ || ೫೬೬ ||

ಇಲ್ಲಿಯೆ ಯುದ್ಧವ ಮಾಡುತ ನಾನು
ರಾವಣ ಹಾಗೂ ಮಗನನು ಕೂಡಾ
ಕಟ್ಟುತ ಹೆಡೆಮುರಿ ತರುವೆನು ಅಲ್ಲಿಗೆ
ಎನ್ನಯ ಮಾತನು ನಂಬುತ ಹೋಗೈ || ೫೬೭ ||

**ಸುಷೇಣನ ಸಲಹೆ**

ಎನ್ನಲು ಸುಷೇಣ ಅಂದನು ರಾಜನೆ
ಬಲ್ಲೆನು ಹಿಂದಕೆ ಯುದ್ಧವು ಆದುದ
ದೇವರು ದಾನವರಲ್ಲಿಯೆ ಭೀಕರ
ದಾನವ ಮಾಯೆಗೆ ಸಾಯುತಲಿದ್ದರು || ೫೬೮ ||

ಎಷ್ಟೋ ದೇವರು ಅಸುವನು ತೊರೆಯುತ
ದೇವರ ಗುರುವಿಗೆ ಗೊತ್ತಿದೆ ವಿದ್ಯೆಯು
ಮೃತಸಂಜೀವಿನಿ ಮಂತ್ರವು ಅವನಿಗೆ
ಅಲ್ಲದೆ ಮೂಲಿಕೆ ಹಾಕುತ ಆತನು ॥ ೫೬೯ ॥

ಬದುಕಿಸುತಿದ್ದನು ಆಗಲೆ ಆತನು
ಮೂಲಿಕೆಯೆಲ್ಲವು ಇರುವವು ಈಗಲು
ಕ್ಷೀರಸಾಗರದ ಬಳಿಯಲಿ ಇಂದಿಗು
ಸಂಪಾತಿ ಪನಸ ವಾನರವೀರರು ॥ ೫೭೦ ॥

ಬಲ್ಲರು ಮೂಲಿಕೆ ಹೋಗಲಿ ತರಲು
ಅಲ್ಲದೆ ಇರುವವು ಔಷಧಿಗಳೆರಡು
ಬ್ರಹ್ಮನಿರ್ಮಿತವು ಹೆಸರಿದೆ ಅವಕೆ
ಸಂಜೀವಕರಣಿ ವಿಶಲ್ಯಕರಣಿಯು ॥ ೫೭೧ ॥

ಇರುವವು ಎರಡೂ ದಿವ್ಯೌಷಧಗಳು
ತನ್ನಿರಿ ಅವುಗಳ ಕೂಡಲೆ ನೀವು
ಅಮೃತಮಂಥನ ನಡೆದಿಹ ಸಾಗರ
ಕ್ಷೀರಸಾಗರವೆಂಬುದ ಬಲ್ಲಿರಿ ॥ ೫೭೨ ॥

ಅಲ್ಲಿಯೆ ಇರುವವು ಪರ್ವತಗಳೆರಡು
ಚಂದ್ರ ದ್ರೋಣವು ಹೆಸರಿವೆ ಅವಕೆ
ಅಲ್ಲಿಯೆ ಸಿಗುವವು ಹೇಳಿದ ಮೂಲಿಕೆ
ವಾಯುಪುತ್ರನೇ ಹೋಗಲಿ ಅಲ್ಲಿಗೆ ॥ ೫೭೩ ॥

## ಗರುಡನ ಆಗಮನ

ಆಗಲೆ ಬೀಸಿತು ಗಾಳಿಯು ಭರದಲಿ
ವೇಗದಿ ಆಯಿತು ಚಂಡಮಾರುತವು
ಗಿಡಗಳು ಬಿದ್ದವು ಮೋಡವು ಚದುರಿತು
ನಡುಗಿತು ಭೂಮಿಯು ಉಡುಗಿತು ಸಾಗರ || ೫೭೪ ||

ಬಂದನು ರಭಸದಿ ಗರುಡನು ಆಗಲೆ
ಕಾಣುತ ಅವನನು ಅಗ್ನಿಯ ತೇಜನ
ಬಾಣದ ರೂಪದಿ ಬಂಧನ ಮಾಡಿದ
ಸರ್ಪಗಳೆಲ್ಲಾ ಓಡುತ ಹೋದವು || ೫೭೫ ||

ಸ್ವಾಗತಗೈದರು ಆಗಲೆ ಗರುಡಗೆ
ರಾಮ ಲಕ್ಷ್ಮಣರ ಮುಖಗಳ ಮೇಲೆಯೆ
ಕೈಯನು ಎಳೆಯುತ ಗರುಡನು ಆಗಲೆ
ಒತ್ತಿದನು ಕೈಯನು ಪಾದದ ವರೆಗೂ || ೫೭೬ ||

ಕೂಡಲೆ ಹೋದವು ಗಾಯಗಳೆಲ್ಲವು
ಎದ್ದರು ಇಬ್ಬರು ಮೊದಲಿನ ತೇಜದಿ
ವೀರ್ಯವು ತೇಜವು ಸ್ಮರಣಶಕ್ತಿಯೂ
ಉತ್ಸಾಹ ಬುದ್ಧಿ ವಿವೇಚನೆ ಬಲವು || ೫೭೭ ||

ದ್ವಿಗುಣಿತವಾದವು ಆಗಲೆ ಎಲ್ಲವು
ಅಪ್ಪುತ ಗರುಡನ ಕೇಳಿದ ರಾಮನು
ಮಹಾತ್ಮ ಯಾರಿಹೆ ಹೇಳೈ ನೀನು
ನಿನ್ನಯ ಕರುಣೆಯು ಫಲಿಸಿತು ಎಮಗೆ || ೫೭೮ ||

ನಾಗಪಾಶದಲಿ ಬಂಧಿತ ಎಮ್ಮನು
ಬಿಡಿಸಿದೆಯಲ್ಲದೆ ಶಕ್ತಿಯು ಬೆಳೆಯಿತು
ನಿನ್ನನು ನೋಡುತ ತಂದೆಯ ನೆನೆಸುವೆ
ಪ್ರೀತಿಯು ಬುಗ್ಗೆಯು ಉಕ್ಕುತಲಿರುವುದು || ೫೭೯ ||

**ಗರುಡನ ವಿವರಣೆ ಹಾಗೂ ಸಲಹೆ**

ವಿನತೆಯ ಕುವರನು ಗರುಡನು ಅಂದನು
ರಾಮನೆ ನಿನ್ನಯ ಗೆಳೆಯನೆ ಇರುವೆನು
ಪ್ರಾಣದ ತೆರದಲಿ ಹತ್ತಿರ ಇರುವೆನು
ನಾಗಪಾಶವಿದು ಅತಿಭೀಕರವಿದು || ೫೮೦ ||

ಅತಿಬಲ ಬಹುಬಲ ದೇವರು ದಾನವ
ಗಂಧರ್ವರಾದರು ಬಿಡಿಸಲು ಆಗದು
ದೇವೇಂದ್ರನು ಸಹ ಬಂದರು ಕೂಡಾ
ಆಗದು ಪಾಶವ ಬಿಡಿಸಲು ಎಂದಿಗು || ೫೮೧ ||

ಇಂದ್ರಜಿತುವಿನಿಂ ಮಾಯಾಬಲದಲಿ
ನಿರ್ಮಿತವಾದುದು ನಾಗಪಾಶವಿದು
ತೀಕ್ಷ್ಣದ ಹಲ್ಲಿನ ವಿಷಮಯ ನಾಗರು
ಕದ್ರೂತನಯರು ಅತಿಶಯ ಕ್ರೂರರು || ೫೮೨ ||

ರಕ್ಕಸಕುವರನ ಮಾಯಾ ಶಕ್ತಿಯು
ಫಲದಲಿ ಹೊಂದುತ ಬಾಣದ ರೂಪವ
ಕಚ್ಚುತ ಹಿಡಿದರು ಇಬ್ಬರು ನಿಮ್ಮನು
ನಾಗಪಾಶದಲಿ ಬಂಧಿತ ಸುದ್ದಿಯು || ೫೮೩ ||

ತಿಳಿಯುತ ಬಂದೆನು ಕೂಡಲೆ ನಾನು
ಅತಿಶಯ ಘೋರದ ಪಾಶದಿ ಮುಕ್ತರು
ಈಗಿನ ಯುದ್ಧದ ಕಾಲದಿ ನೀವು
ಹೆಚ್ಚಿನ ಎಚ್ಚರ ವಹಿಸಲೆ ಬೇಕು || ೩೮೪ ||

ರಾಕ್ಷಸರೆಲ್ಲರು ಮಾಯಾವಿಗಳು
ಮೋಸದ ಯುದ್ಧವ ಮಾಡುವರವರು
ನಂಬದೆ ಅವರನು ಕುಟಿಲ ಚಿತ್ತರನು
ಯುದ್ಧವ ಮಾಡಿರಿ ಎಚ್ಚರದಿಂದಲಿ || ೩೮೫ ||

ಅಪ್ಪುತ ರಾಮನ ಇನ್ನೂ ಅಂದನು
ನಿನ್ನಯ ಮಿತ್ರನು ಆದೆನು ಹೇಗೆ
ಎನ್ನುವ ವಿಷಯ ಕೇಳಲು ಬೇಡಾ
ಮುಂದಕೆ ತಿಳಿಯುವದೆಲ್ಲವೂ ನಿನಗೆ || ೩೮೬ ||

ಲಂಕೆಯ ಒಳಗಿನ ಹುಡುಗರ ಮುದುಕರ
ಬಿಡುತಲೆ ಕೊಲ್ಲುವೆ ಉಳಿದವರೆಲ್ಲರ
ರಾವಣ ವಧೆಯನು ಮಾಡುತ ನೀನು
ಮರಳುವೆ ನಿಜಕೂ ಸೀತೆಯ ಸಹಿತ || ೩೮೭ ||

ಎನ್ನುತ ಗರುಡನು ನಮಿಸುತ ರಾಮಗೆ
ಹಾರಿದ ಗಗನದಿ ಬಾಣದ ತೆರದಲಿ
ರಾಮ ಲಕ್ಷ್ಮಣರು ಎದ್ದುದ ತಿಳಿಯುತ
ವಾನರವೀರರು ಗರ್ಜನೆಗೈದರು || ೩೮೮ ||

## ವಾನರರ ಸಂಭ್ರಮ

ಭೇರಿಯು ಮೃದಂಗ ಸಪ್ಪಳ ತುಂಬಿತು
ಶಂಖದ ಕೂಗದು ಕೇಳಿತು ಎಲ್ಲೆಡೆ
ಹರ್ಷದ ಕುಣಿತವು ಕಪಿಗಳ ಕೇಕೆಯು
ಆಯಿತು ಕೋಲಾಹಲವೇ ರಣದಲಿ ‖ ೫೮೯ ‖

ಕೇಳಿತು ಸಪ್ಪಳ ಲಂಕಾನಗರದಿ
ದುಃಖದ ಸಮಯದಿ ಹರ್ಷದ ತುಮುಲವೆ
ಕಳಿಸಿದ ಸಚಿವರ ಕೂಡಲೆ ಹೋಗುತ
ತಿಳಿಸಿರಿ ಈಗಲೆ ಆದುದು ಏನದು ‖ ೫೯೦ ‖

ಹೋಗುತ ಸಚಿವರು ಕೋಟೆಯ ಮೇಲೆಯೆ
ನೋಡುತ ಎಲ್ಲವ ಬಂದರು ಕೂಡಲೆ
ರಾವಣ ದೊರೆಯೇ ರಾಮಲಕ್ಷ್ಮಣರು
ಪಾಶದಿ ಮುಕ್ತರು ಧನುರ್ಧಾರಿಗಳು ‖ ೫೯೧ ‖

ಯುದ್ಧಕೆ ಸಿದ್ಧರು ಆಗಿ ನಿಂತಿಹರು
ಕೇಳುತ ಈ ನುಡಿ ರಾವಣ ಮಿಡುಕಿದ
ಅಮೋಘ ಅಸ್ತ್ರದಿ ಮುಕ್ತರು ಹೇಗದು
ಎಂದಿಗು ಕಾಣದ ಕೇಳದ ರೀತಿಯು ‖ ೫೯೨ ‖

## ಪುನಃ ಯುದ್ಧಕ್ಕೆ ರಾವಣನ ಆಜ್ಞೆಯು

ಎನ್ನುತ ಕರೆದನು ಸೇನಾಪತಿಯನು
ಧೂಮ್ರಾಕ್ಷ ವೀರ ಭೀಮಪರಾಕ್ರಮಿ
ಬಲಯುತ ಸೇನೆಯ ಒಯ್ಯುತ ನೀನು
ಕೊಲ್ಲೆಲೊ ರಾಮನ ಕಪಿಗಳ ಸಹಿತದಿ ‖ ೫೯೩ ‖

ಆಜ್ಞೆಯ ಪಡೆಯುತ ಹೊರಟನು ಧೂಮ್ರನು
ಸೊಂಟದಿ ಗಂಟೆಯ ಕಟ್ಟಿಹ ಭಟರೂ
ಬಂದರು ಹೊಂದುತ ಮುದ್ಗರ ಪಟ್ಟಿಸ
ಶೂಲ ಗದೆ ಮುಸಲ ಲೋಹದ ದಂಡವ || ೫೯೪ ||

ಪರಿಘವ ಭಲ್ಲೆಯ ಭಿಂಡಿಪಾಲವ
ಪ್ರಾಸಪರಶ್ವಧ ಇನ್ನೂ ಆಯುಧ
ಬಂದರು ಎಲ್ಲರು ಕವಚವ ತೊಡುತಲಿ
ರಥಗಳನೇರುತ ಗಜಗಳ ಮೇಲೆಯು || ೫೯೫ ||

ಹೊರಟರು ಎಷ್ಟೋ ರಕ್ಕಸವೀರರು
ಗುಡುಗುವ ಗರ್ಜನೆ ಮಾಡುತ ಧೂಮ್ರನು
ಬಂದನು ಪಶ್ಚಿಮ ದಿಕ್ಕಿನ ದ್ವಾರಕೆ
ಅಲ್ಲಿಯೆ ನಿಂತಿಹ ಹನುಮನ ನೋಡಿದ || ೫೯೬ ||

ಹನುಮಂತ-ಧೂಮ್ರಾಕ್ಷರ ಕಾಳಗ

ಕೂಡಲೆ ನಡೆಯಿತು ಭೀಕರ ಕದನವು
ರಕ್ಕಸ ಭಟರಿಗೆ ವಾನರವೀರರು
ತೂರುತ ಬಂದರು ಕಲ್ಲಿನ ಮಳೆಯನು
ಅಲ್ಲದೆ ಮರಗಳೆ ಆಯುಧ ಅವರಿಗೆ || ೫೯೭ ||

ರಕ್ಕಸ ಹೊಡೆತಕೆ ಮಡಿದರು ಕಪಿಗಳು
ಸಾಗಿತು ಯುದ್ಧವು ಉಗ್ರವು ಆಯಿತು
ಕಂಡಿತು ಎಲ್ಲೆಡೆ ಹೆಣಗಳ ರಾಶಿಯು
ರಕ್ಕಸ ಹೊಡೆತಕೆ ಚದುರಿತು ಕಪಿಬಲ || ೫೯೮ ||

ನೋಡುತ ಈ ಪರಿ ಕನಲಿದ ಹನುಮನು
ಬಂಡೆಯನೆತ್ತುತ ಧೂಮ್ರನ ಕಡೆಗೆ
ನಡೆದನು ಸಿಟ್ಟಲಿ ತೂರುತ ಆಗಲೆ
ನೋಡುತ ಹನುಮನ ಧೂಮ್ರನು ಎದ್ದನು || ೫೯೯ ||

ಹನುಮನ ಏಟಿಗೆ ರಥವದು ಮುರಿಯಿತು
ರಥದಿಂ ಇಳಿಯುತ ಗದೆಯನು ಎತ್ತಿದ
ಹಯಗಳು ಮಡಿದವು ಸಾರಥಿ ಮಡಿದನು
ಧನುವದು ಮುರಿಯಿತು ಒಂದೇ ಏಟಿಗೆ || ೬೦೦ ||

ಕೊಲ್ಲುತ ರಕ್ಕಸ ಭಟರನು ಹನುಮನು
ಪರ್ವತ ಶಿಖರವ ಹಿಡಿಯುತ ಎದುರಿಗೆ
ತರುಬಿದ ಧೂಮ್ರನ ಅಕ್ಷಿಯ ಆಗಲೆ
ಧೂಮ್ರನು ಬೀಸುತ ಗದೆಯನು ಕೂಡಲೆ || ೬೦೧ ||

ಹೊಡೆದನು ಹನುಮನ ತಲೆಗೇ ನೇರಕೆ
ಸಹಿಸುತ ಹನುಮನು ಪರ್ವತ ಶಿಖರವ
ಎತ್ತುತ ಧೂಮ್ರನ ಮೇಲೆಯೆ ಹೇರಿದ
ಜಜ್ಜಿತು ದೇಹವು ನೆತ್ತರ ಹರಿಯಿತು || ೬೦೨ ||

ಧೂಮ್ರನು ಕಿರುಚುತ ಅಸುವನು ನೀಗಿದ
ನೋಡುತ ಈ ಪರಿ ರಕ್ಕಸವೀರರು
ಓಡಿದರೆಲ್ಲರು ಲಂಕೆಯ ಒಳಗಡೆ
ಸುದ್ದಿಯು ತಲುಪಿತು ರಾವಣ ದೊರೆಗೆ || ೬೦೩ ||

## ಅಂಗದ-ವಜ್ರದಂಷ್ಟ್ರರ ಕಾಳಗ

ರಾವಣ ಕರೆಸಿದ ವಜ್ರದಂಷ್ಟ್ರನನು
ವೀರಾಗ್ರೇಸರ ಮೆಚ್ಚಿದ ವೀರನೆ
ನೀನೆ ಒಯ್ಯುತ ಒಳ್ಳೆಯ ಪಡೆಯನು
ರಾಮ ಲಕ್ಷ್ಮಣರ ಸುಗ್ರೀವನ ಸಹ ॥ ೭೦೪ ॥

ಕೊಲ್ಲುತ ಬಾರೈ ಶೂರನೆ ನೀನು
ಹೊರಟನು ಆತನು ಮಣಿಯುತ ರಾಜಗೆ
ರಕ್ಕಸ ಪಡೆಯೂ ಹೊರಟಿತು ಜೊತೆಗೆ
ಆಯುಧವಿದ್ದವು ಯಷ್ಟಿ ಶೂಲಗಳು ॥ ೭೦೫ ॥

ತೋಮರ ಪಾಶವು ಖಡ್ಗವು ಶಕ್ತಿಯು
ಪರಶುಗಳಲ್ಲದೆ ಇನ್ನೂ ಎಷ್ಟೋ
ಆಯುಧ ಹಿಡಿದಿಹ ರಕ್ಕಸಯೋಧರು
ಹೊರಟರು ವಜ್ರನ ಪಡೆಯಲಿ ಎಲ್ಲರು ॥ ೭೦೬ ॥

ಬಂದರು ಹಾಗೆಯೆ ದಕ್ಷಿಣ ದ್ವಾರದಿ
ಎದುರಿಗೆ ಇದ್ದಿತು ಅಂಗದ ಸೇನೆಯು
ಗರ್ಜನೆಯಾಯಿತು ಎರಡೂ ಪಡೆಯಲಿ
ಕದನಕೆ ಕರೆದರು ಒಬ್ಬರನೊಬ್ಬರು ॥ ೭೦೭ ॥

ಮೊಳಗಿತು ಭೇರಿಯು ಕದನವು ನಡೆಯಿತು
ಒಬ್ಬರನೊಬ್ಬರು ಕೊಲ್ಲುವ ಕಿಚ್ಚದು
ಉರಿಯಿತು ಭೀಕರ ರೂಪದಿ ಎಲ್ಲೆಡೆ
ವಜ್ರನು ಆದನು ಯುದ್ಧಭಯಂಕರ ॥ ೭೦೮ ॥

ನಡೆಯಿತು ಕದನವು ಭೀಕರವಾಗಿಯೆ
ಎರಡೂ ಕಡೆಯಲಿ ಮಡಿದರು ಎಷ್ಟೋ
ಕೊನೆಯಲಿ ನಡೆಯಿತು ಇಬ್ಬರ ಕದನವು
ಅಂಗದ ವಜ್ರನ ಮುಷ್ಟಿಯ ಯುದ್ಧವು || ೬೦೯ ||

ಕೊನೆಯಲಿ ಅಂಗದ ಕತ್ತಿಯನೆತ್ತುತ
ಹೊಡೆದನು ವಜ್ರನ ಕುತ್ತಿಗೆ ಮೇಲೆಯೆ
ಪುಟಿಯಿತು ಮಸ್ತಕ ಕಣ್ಗಳು ತಿರುಗುತ
ದೇಹವು ಕದನವ ಮಾಡುತಲಿದ್ದಿತು || ೬೧೦ ||

ನೋಡುತ ಅಂಗದ ದೇಹದ ಸಾಹಸ
ಒದೆದನು ಎದೆಯಲಿ ದೇಹವು ಬಿದ್ದಿತು
ನೋಡುತ ವಜ್ರನ ಸಾವನು ಎಲ್ಲರು
ಓಡಿದರಾಗಲೆ ಲಂಕೆಯ ಒಳಗಡೆ || ೬೧೧ ||

**ಅಕಂಪನ ಹಾಗು ಹನುಮಂತನ ಕಾಳಗ**

ಕೇಳುತ ವಜ್ರನ ಸಾವಿನ ಸಂಗತಿ
ರಾವಣ ಹೇಳಿದ ಸೇನಾಪತಿಗೆ
ಒಳ್ಳೆಯ ಪಡೆಯನು ನಿರ್ಮಿಸು ಈಗಲೆ
ಅಕಂಪನನ್ನೇ ಕಳುಹಿಸು ಈ ಸಲ || ೬೧೨ ||

ಸರ್ವಶಸ್ತ್ರಾಸ್ತ್ರ ಕೋವಿದನಿರುವನು
ಯುದ್ಧದ ಗತ್ತನು ಬಲ್ಲನು ಆತನು
ಅಂತೆಯೆ ಹೊರಟನು ಅಕಂಪನು ಕೂಡ
ಪರ್ವತಪ್ರಾಯದ ಸೈನಿಕರೊಂದಿಗೆ || ೬೧೩ ||

ನಡೆಯಿತು ಕದನವು ಮೊದಲಿನ ತೆರದಲಿ
ಆಯಿತು ಉಗ್ರವು ಇನ್ನೂ ಹೆಚ್ಚಿಗೆ
ರಾಕ್ಷಸ ವಧೆಯನು ನೋಡುತ ಆತನು
ಕಾಲನ ತೆರದಲಿ ಶರಗಳ ಸುರಿಸಿದ ॥ ೬೧೪ ॥

ರಕ್ಕಸನೇಟಿಗೆ ತಡೆಯದೆ ಕಪಿಗಳು
ಚದುರಿದರೆಲ್ಲೆಡೆ ನಿಲ್ಲದೆ ಒಂದೆಡೆ
ನೋಡುತ ಹನುಮನು ವಾನರ ನಾಶವ
ಬಂದನು ಅಲ್ಲಿಗೆ ಕಿಡಿಕಿಡಿಯಾಗುತ ॥ ೬೧೫ ॥

ನೋಡುತ ಹನುಮನ ವಾನರಸೇನೆಯು
ಸಂತಸದಿಂದಲಿ ಕೂಡಿತು ಮತ್ತೆ
ಸುರಿಸಿದ ಶರಗಳ ಲೆಕ್ಕಕೆ ತಾರದೆ
ಹನುಮನು ಸಾಗಿದ ಮರವನು ಕಿತ್ತುತ ॥ ೬೧೬ ॥

ಹನುಮನು ತೂರಿದ ಗಿಡಗಳ ಬಂಡೆಯ
ಬಾಣದಿ ನಡುವೆಯೆ ಚೂರನು ಮಾಡುತ
ಮುಂದಕೆ ನುಗ್ಗುತ ಬರುತಿಹ ರಕ್ಕಸ
ಅಬ್ಬರದಿಂದಲಿ ಗರ್ಜನೆ ಮಾಡಿದ ॥ ೬೧೭ ॥

ಕೊನೆಯಲಿ ಹನುಮನು ನಿಶ್ಚಯ ಮಾಡುತ
ಸಿಟ್ಟಿನ ಭರದಲಿ ಕಿತ್ತುತ ಗಿಡವನು
ಕೊಟ್ಟನು ಏಟನು ರಕ್ಕಸ ತಲೆಗೆ
ಒಡೆಯಿತು ಮಸ್ತಕ ಒರಗಿದ ನೆಲಕೆ ॥ ೬೧೮ ॥

ಮೆಚ್ಚಿದರಾಗಲೆ ಕಪಿವರರೆಲ್ಲರು
ಹನುಮನ ಶೌರ್ಯಕೆ ಅಂದರು ಭಲೆಭಲೆ
ವಾನರಸೈನ್ಯವು ಕುಣಿಯಿತು ಹರ್ಷದಿ
ಆಕಂಪನ ವಧೆಯು ಸುದ್ದಿಯು ಮುಟ್ಟಿತು || ೬೧೯ ||

ರಾವಣನು ಸೇನಾಪತಿಯ ಸಲಹೆ ಕೇಳುವದು

ರಾವಣ ಕರೆಸಿ ಪ್ರಹಸ್ತನನಾಗಲೆ
ಸೇನಾಪತಿಯೇ ಯೋಜನೆಯೇನು
ಸಚಿವರೆ ಹೇಳಿರಿ ಮುಂದಿನ ಕಾರ್ಯವ
ಕಪಿಗಳ ಬಲವದು ಹೆಚ್ಚುತಲಿರುವದು || ೬೨೦ ||

ವೈರಿಯು ಮುತ್ತಿಗೆ ಹಾಕಿದ ಸಮಯದಿ
ಕದನವು ಇರುವದು ಒಂದೇ ಮಾರ್ಗವು
ಒಳ್ಳೆಯ ರಕ್ಕಸವೀರರು ಮಡಿದರು
ಯುದ್ಧಕೆ ನಾನೇ ಇಲ್ಲವೆ ಅನುಜನು || ೬೨೧ ||

ನಮ್ಮನು ಬಿಟ್ಟರೆ ನೀನೇ ಯೋಗ್ಯನು
ಇಂದ್ರಜಿತುವನೂ ನಿಕುಂಭನೂ ಸಹ
ಕದನವ ಮಾಡಲು ಶಕ್ತರು ಇರುವರು
ನೀನೆ ಯುದ್ಧಕೆ ಸಿದ್ಧನು ಆಗು || ೬೨೨ ||

ನಿನ್ನನು ನೋಡುತ ಕಪಿಗಳು ನಿಲ್ಲರು
ಗರ್ಜನೆ ಕೇಳುತ ಓಡುವರೆಲ್ಲರು
ಜಯವೋ ಇಲ್ಲವೋ ಎನ್ನುವ ಸಮಯದಿ
ಕದನವೆ ಮಾರ್ಗವು ಎನ್ನುವೆ ನಾನು || ೬೨೩ ||

ಸುಮ್ಮನೆ ಕುಳಿತರೆ ವೈರಿಯು ಒರುತಲಿ
ಕೊಲ್ಲುವನೆಮ್ಮನು ಸಂಶಯವಿಲ್ಲವು
ಈಗಿನ ಸಮಯದಿ ಮಾಡುವುದೇನು
ಯುದ್ಧದಿ ಕುಶಲನು ಯೋಚಿಸಿ ಹೇಳು || ೬೨೪ ||

**ಪ್ರಹಸ್ತನ ಸಲಹೆ**

ಒಳ್ಳೆಯದಿದ್ದರು ಇಲ್ಲದೆ ಇದ್ದರು
ನಿನ್ನಯ ಪಕ್ಷದ ಮತವನು ಹೇಳು
ಎನ್ನಲು ಅಂದನು ರಾಜನೆ ಕೇಳು
ಹಿಂದೆಯೆ ವಿಚಾರ ಮಾಡಿದುದಾಗಿದೆ || ೬೨೫ ||

ಸಚಿವರ ಸಭೆಯಲಿ ಒಮ್ಮತವಾಗದೆ
ಹೇಳಿದರೆಲ್ಲರು ತಮ್ಮಯ ಮತವನು
ಸೀತೆಯ ರಾಮಗೆ ಕಳಿಸುವ ಮತವದು
ನನ್ನದು ಇದ್ದಿತು ತಿಳಿದಿದೆ ನಿಮಗೂ || ೬೨೬ ||

ಒಪ್ಪಿಸದಿದ್ದರೆ ಕದನವೆ ಗತಿಯು
ಎನ್ನುವ ಎನ್ನಯ ಮಾತೇ ಫಲಿಸಿದೆ
ಆದರೆ ನಿನ್ನಯ ಕರುಣೆಯ ಫಲದಿಂ
ಆಗಿಹೆ ಇಂದಿಗೆ ಸೇನಾಪತಿಯು || ೬೨೭ ||

**ಪ್ರಹಸ್ತನು ಯುದ್ಧಕ್ಕೆ ಹೊರಟುದು**

ಎನ್ನಯ ಮತವದು ಏನೇ ಇದ್ದರು
ನಿನ್ನಯ ಆಜ್ಞೆಯು ಶಿರಸಾವಮಾನ್ಯವು
ಕೊಲ್ಲುತ ಕಪಿಗಳ ಚೆಲ್ಲುವೆ ರಣದಲಿ
ಹಬ್ಬವು ಆಗಲಿ ಹದ್ದುಗಳೆಲ್ಲಕೆ || ೬೨೮ ||

ಕರೆದನು ಆಗಲೆ ಬಲಾಧ್ಯಕ್ಷರನು
ಅಜಿಂಕ್ಯ ರಕ್ಕಸ ಸೇನೆಯು ಹೊರಟಿತು
ಪ್ರಹಸ್ತನ ರಥಕೆ ಇದ್ದಿತು ಕವಚವು
ಸರ್ಪಧ್ವಜವನು ಹೊಂದುತ ಮೆರೆಯುತ || ೭೨೯ ||

ತಮಟೆ ರಣಭೇರಿ ಮೊಳಗಿದವಾಗಲೆ
ಶಂಖದ ಧ್ವನಿಯೂ ತುಂಬಿತು ನಭವನು
ಸುತ್ತಲು ಇದ್ದರು ನಾಲ್ವರು ಸಚಿವರು
ನರಾಂತಕ ಮಹಾನಾದ ಕುಂಭಹನು || ೭೩೦ ||

ಅಲ್ಲದೆ ಇರುವನು ಸಮುನ್ನತನೆಂದು
ನಾಲ್ವರು ಹೊರಟರು ರಕ್ಷಣೆ ಕೊಡುತಲಿ
ಪ್ರಹಸ್ತನ ಯಾರೂ ಮುಟ್ಟಲು ಆಗದು
ನಡೆಯಿತು ಸೇನೆಯು ವ್ಯೂಹದ ತೆರದಲಿ || ೭೩೧ ||

ಅಗಣಿತ ರಕ್ಕಸ ಸೇನೆಯ ಸಂಗಡ
ಬರುತಿಹ ರಕ್ಕಸ ವೀರನು ಯಾರು
ಎನ್ನುತ ಕೇಳಿದ ರಾಮನು ಆಗಲೆ
ವಿಭೀಷಣನಾಗ ಹೇಳಿದನೀ ಪರಿ || ೭೩೨ ||

ರಕ್ಕಸ ಸೇನೆಯ ಮುಖ್ಯನು ಪ್ರಹಸ್ತ
ಲಂಕೆಯ ಸೇನೆಯ ಮೂರನೆ ಭಾಗಕೆ
ಒಡೆಯನು ಆಗುತ ಬಂದಿಹನೀತನು
ಅಸ್ತ್ರವಿದ್ಯೆಯಲಿ ನಿಪುಣನು ಇರುವನು || ೭೩೩ ||

## ಪ್ರಹಸ್ತನ ಭೀಕರ ಕದನ

ವೀರನು ಶೂರನು ಪರಾಕ್ರಮಿ ಇಹನು
ಅಣ್ಣನ ಬಲಗೈ ಎಂದರು ಸರಿಯೇ
ಆಗಲೆ ಬಂದಿತು ಸೇನೆಯು ಅಲೆಯು
ಕ್ಷಣದಲಿ ನಡೆಯಿತು ಕದನವು ರಭಸದಿ || ೬೩೪ ||

ರಾಕ್ಷಸ ಸಚಿವರು ನಾಲ್ವರು ಕೂಡಿ
ಕೊಲ್ಲುತ ನಡೆದರು ಕಪಿಬಲ ಅತಿಶಯ
ಪ್ರಹಸ್ತನ ಶರಕೆ ಉಗ್ರತೆ ಹೆಚ್ಚಿತು
ವಾನರ ಮುಖ್ಯರ ಕೋಪವು ಮೀರಿತು || ೬೩೫ ||

ದ್ವಿವಿದನು ಕೊಂದನು ನರಾಂತಕನನ್ನು
ಹಾಕುತ ತಲೆಯಲಿ ಬೆಟ್ಟದ ಬಂಡೆಯ
ದುರ್ಮುಖ ಕಪಿವರ ಗಿಡದಿಂ ಹೊಡೆಯುತ
ಕೊಂದನು ಸಚಿವನ ಸಮುನ್ನತನನು || ೬೩೬ ||

ಜಾಂಬವ ಹೊಡೆಯುತ ವಕ್ಷಸ್ಥಳದಲಿ
ಕೊಂದನು ಕೂಡಲೆ ಮಹಾನಾದನನು
ತಾರನ ಏಟಿಗೆ ಮಡಿದ ಕುಂಭಹನು
ಈ ತೆರ ಸತ್ತರು ನಾಲ್ವರು ಸಚಿವರು || ೬೩೭ ||

ನೋಡುತ ಸಚಿವರ ಪರಿಯನು ಪ್ರಹಸ್ತ
ಕಿಡಿಕಿಡಿಯಾಗುತ ಉರಿದನು ರಣದಲಿ
ಶರಗಳ ಜಾಲವ ನಿರ್ಮಿಸಿ ಕಪಿಗಳ
ಮುಕ್ಕಿದ ನೆಕ್ಕಿದ ಕುಕ್ಕಿದ ಕೊಚ್ಚಿದ || ೬೩೮ ||

## ಪ್ರಹಸ್ತ ನೀಲರ ಕಾಳಗ

ತಡೆಯಲು ಅವನನು ನೀಲನು ಒಂದನು
ಘಾತಿಸಿ ಅವನನು ಬಾಣವ ನಾಟಿಸಿ
ಗರ್ಜನೆ ಮಾಡಿದ ರಾಕ್ಷಸವೀರನು
ನೀಲನು ಛಲದಲಿ ಕಿತ್ತನು ಬಿಲ್ಲನು || ೬೩೯ ||

ಕೂಡಲೆ ಪ್ರಹಸ್ತ ಮುಸಲವ ಎತ್ತುತ
ಬಿದ್ದನು ನೀಲನ ಮೇಲೆಯೆ ನೇರಕೆ
ಇಬ್ಬರು ಸೇನಾಪತಿಗಳು ದ್ವಂದ್ವದಿ
ಮೀರಿದರಿಬ್ಬರು ಶೌರ್ಯದಿ ಧೈರ್ಯದಿ || ೬೪೦ ||

ಕಾದಿದರಿಬ್ಬರು ಮದಗಜ ತೆರದಲಿ
ಕೊನೆಯಲಿ ನೀಲನು ಬಂಡೆಯನೆತ್ತುತ
ಹೊಡೆದನು ರಕ್ಕಸವೀರನ ತಲೆಗೆ
ಒಡೆಯಿತು ಮಸ್ತಕ ಬಿದ್ದನು ನೆಲದಲಿ || ೬೪೧ ||

ರಕ್ಕಸ ವಾನರ ವೀರರು ಎಲ್ಲರು
ನೋಡುತಲಿದ್ದರು ಕದನವ ಇಬ್ಬರ
ಸೇನಾಪತಿಗಳ ಕುತೂಹಲದಿಂದ
ನೀಲನ ವಿಜಯವ ನೋಡುತ ಕಪಿಬಲ || ೬೪೨ ||

ಕುಣಿಯಿತು ಕೂಗಿತು ಗರ್ಜನೆ ಮಾಡಿತು
ರಕ್ಕಸ ಸೇನೆಯ ಧೈರ್ಯವು ಉಡುಗಿತು
ಓಡಿದರೆಲ್ಲರು ಲಂಕೆಯ ಒಳಗಡೆ
ವಾನರವೀರರು ಅಟ್ಟಿದರವರನು || ೬೪೩ ||

**ರಾವಣನ ಕೋಪ, ಯುದ್ಧಕ್ಕೆ ತಾನೇ ಹೊರಡುವದು**

ಸೇನಾಪತಿಯುದು ಮರಣವ ಕೇಳುತ
ರಾವಣ ಉರಿದನು ದುಃಖಿತನಾದನು
ಅಗ್ನಿಯು ಪುತ್ರನು ನೀಲನು ಕೊಂದನೆ
ಇಂದ್ರನ ಸೋಲಿಸಬಲ್ಲವ ಸತ್ತನೆ || ೬೪೪ ||

ಆಗಲಿ ನೋಡುವೆ ನಾನೇ ಕಪಿಬಲ
ಸುಡುವೆನು ರಾಮನ ಕಪಿಬಲ ಸಹಿತದಿ
ನೆತ್ತರದೂಟವ ಕೊಡುವೆನು ಭೂಮಿಗೆ
ತೃಪ್ತಳು ಆಗಲಿ ರಣದೇವತೆಯೂ || ೬೪೫ ||

ವೈರಿಯು ಮಾನವ ಕಪಿಗಳು ಎನ್ನುವ
ಅಲಕ್ಷ್ಯವಂತೂ ಕೂಡದು ಇನ್ನು
ನಾನೇ ಬರುವೆನು ಯುದ್ಧಕೆ ಈಗಲೆ
ಹೊರಡಲಿ ಎನ್ನಯ ಸೇನೆಯು ಕೂಡಲೆ || ೬೪೬ ||

ಬಂದಿತು ರಥವೂ ಕುದುರೆಗಳುತ್ತಮ
ಸುತ್ತಲು ಭೇರಿಯು ಮದ್ದಲೆ ವಾದ್ಯವು
ಹೊಗಳುವ ಭಟ್ಟರು ರಕ್ಕಸ ಭಟರೂ
ಭೀಕರ ಕಾಯದ ರಾಕ್ಷಸ ವೀರರು || ೬೪೭ ||

ಬರುತಲಿ ಲಂಕೆಯ ಹೊರಗಡೆ ನೋಡಿದ
ವಾನರ ಸೇನಾಸಾಗರ ನಿಂತಿದೆ
ಯುದ್ಧದ ಸಿದ್ಧತೆಯಲ್ಲಿಯೆ ಇರುವದು
ಕಲ್ಲು ಬಂಡೆ ಗಿಡ ಶಿಖರವೆ ಆಯುಧ || ೬೪೮ ||

**ವಿಭೀಷಣನಿಂದ ರಕ್ಕಸವೀರರ ಪರಿಚಯ**

ಉಕ್ಕುತ ಬರುತಿಹ ರಾಕ್ಷಸ ಸೇನೆಯು
ನೋಡುತ ರಾಮನು ಕೇಳಿದ ಆಗಲೆ
ವಿಭೀಷಣವರನೆ ಯಾರಿದು ಸೇನೆಯು
ಕಾಣುವರಲ್ಲವೆ ಭೀಕರ ವೀರರು || ೬೪೯ ||

ವಿಭೀಷಣನೆಂದ ರಾಮನೆ ಕೇಳ್ಳೈ
ಆನೆಯ ಮೇಲೆಯೆ ಬರುತಿಹ ರಕ್ಕಸ
ಅಕಂಪನೆಂಬುದು ಅವನಿಗೆ ಹೆಸರು
ಯುದ್ಧದಿ ಅವನೂ ನಾಮಾಂಕಿತನು || ೬೫೦ ||

ಆ ಕಡೆ ಕಾಣುವ ರಥದಲಿ ನೋಡು
ಸಿಂಹದ ಧ್ವಜವು ಇರುತಿದೆ ಮೇಲಕೆ
ಮೇಘನಾದನೇ ರಾವಣ ಕುವರನು
ಇಂದ್ರನ ಗೆದ್ದಿಹ ಇಂದ್ರಜಿತುವು || ೬೫೧ ||

ಬ್ರಹ್ಮನ ವರದಿಂ ಖ್ಯಾತನು ಇರುವನು
ಬಿಲ್ಲಿನ ಯುದ್ಧದಿ ಗಟ್ಟಿಗನಿರುವನು
ಮುಂದಕೆ ಕಾಣುವ ಅತಿರಥ ರಕ್ಕಸ
ಅತಿಕಾಯನೆಂದು ಹೆಸರಿದೆ ಅವನಿಗೆ || ೬೫೨ ||

ಇತ್ತಲು ಕಾಣುವ ಆನೆಯ ಬೆನ್ನಲಿ
ಕಾಣುವ ವೀರನು ತಾಮ್ರಾಕ್ಷನೆಂದು
ಅಲ್ಲಿಯೆ ಕ್ರೂರದಿ ಗರ್ಜಿಸ ವೀರನು
ಮಹೋದರನೆಂದು ತಿಳಿದಿರು ರಾಮನೆ || ೬೫೩ ||

ಪ್ರಾಸಾಯುಧವನು ಧರಿಸುತ ಬರುತಿಹ
ಕುದುರೆಯ ಮೇಲಿನ ವೀರನು ಗೊತ್ತೇ
ಅವನಿಗೆ ಹೆಸರಿದೆ ಪಿಶಾಚ ಎಂದು
ಸಿಡಿಲಿನ ತೆರದಲಿ ಕೆಣಕುವನಾತನು ॥ ೬೫೪ ॥

ಮಿಂಚಿನ ತೆರದಲಿ ಹೊಳೆಯುವ ಶೂಲವು
ಹಿಡಿದಿಹ ಪರ್ವತ ಪ್ರಾಯದ ದೇಹದ
ರಕ್ಕಸ ಕಾಣುವ ಅವನೇ ತ್ರಿಶಿರನು
ನೀಲಕಾಯದಲಿ ಇರುವವ ಕುಂಭನು ॥ ೬೫೫ ॥

ಅವನದು ಇರುವದು ಹಾವಿನ ಧ್ವಜವು
ಪರಿಘಾಯುಧವನು ಹೊಂದುತ ಬರುತಿಹ
ದೈತ್ಯನ ಹೆಸರಿದೆ ನಿಕುಂಭನೆಂಬುದು
ಘೋರದ ವಿಸ್ಮಯ ಕೆಲಸಕೆ ಮುಖ್ಯನು ॥ ೬೫೬ ॥

ಆ ಕಡೆ ಕಾಣುವ ಉದಗ್ರ ವೀರನು
ಹೆಸರಿದೆ ಅವನಿಗೆ ನರಾಂತಕನೆಂದು
ಶಾಂತಿಯ ಕಾಲದಿ ಪರ್ವತ ಶಿಖರಕೆ
ಗುದ್ದುತ ತೀಟೆಯ ತೀರಿಸುತಿರುವನು ॥ ೬೫೭ ॥

ವಿಕಾರ ಮುಖಗಳ ರಕ್ಕಸಸೇನೆಯ
ಮಧ್ಯದಿ ಕಾಣುವ ವೀರನೆ ರಾವಣ
ಶ್ವೇತಛತ್ರವೂ ಕಿರೀಟ ಕುಂಡಲ
ಕಾಣುವವಿಲ್ಲಿಗೆ ಹೊಳೆಯುತ ಎಲ್ಲವು ॥ ೬೫೮ ॥

ಇಂದ್ರನ ದರ್ಪವ ಕಾಲನ ಸೊಕ್ಕನು
ಅಡಗಿಸಿ ಮೆರೆದಿಹ ರಾವಣ ಇವನೇ
ನೋಡುತ ಅವನನು ರಾಮನು ಅಂದನು
ನಿಜಕೂ ರಕ್ಕಸಚಕ್ರವರ್ತಿ ಸರಿ ॥ ೬೫೯ ॥

ತೇಜವು ಇರುವದು ಸಂಶಯವಿಲ್ಲವು
ಎನ್ನಯ ಕಣ್ಣಿಗೆ ಬಿದ್ದನು ಸಂತಸ
ತೋರುವೆ ಇಂದೆಯೆ ಬಾಣದ ರುಚಿಯನು
ಸೀತೆಯ ತಂದಿಹ ಫಲವನು ಉಣ್ಣಲಿ ॥ ೬೬೦ ॥

ಅತ್ತಲು ರಾವಣ ಹೇಳಿದ ಭಟರಿಗೆ
ಲಂಕೆಯ ನಾಲ್ಕೂ ಬಾಗಿಲುಗಳನೂ
ಕಾಯಿರಿ ಒಳ್ಳೇ ಭದ್ರದಿ ನೀವು
ಎಚ್ಚರದಿಂದಲಿ ಹೆಚ್ಚಿಗೆ ತಿಳಿಯಿರಿ ॥ ೬೬೧ ॥

ಯುದ್ಧದಿ ನಾನೂ ಹೋಗಲು ಮುಂದಕೆ
ರಕ್ಷಣೆ ಇಲ್ಲದ ಬಾಗಿಲದೊಳಗಡೆ
ಕಪಿಗಳು ಹೋಗುತ ಲಂಕೆಯ ಸೇರಲು
ಆಸ್ಪದವೀಯದೆ ಕಾಯಿರಿ ಎಚ್ಚರ ॥ ೬೬೨ ॥

**ರಾವಣ ಸುಗ್ರೀವರ ಕಾಳಗ**

ನಂತರ ರಾವಣ ಸೇನೆಯ ಸಹಿತದಿ
ನುಗ್ಗಿದ ಶರಗಳ ಜಾಲವ ಹಬ್ಬಿಸಿ
ಎದುರಿಗೆ ಬಂದನು ಸುಗ್ರೀವನಾಗ
ಕೈಯಲಿ ಪರ್ವತ ಶಿಖರವ ಹಿಡಿಯುತ ॥ ೬೬೩ ॥

ತೂರಿದ ಶಿಖರವ ರಾವಣನೆಡೆಗೆ
ಆಯಿತು ಪುಡಿಪುಡಿ ರಾವಣನಸ್ತ್ರಕೆ
ನಂತರ ಬಿಟ್ಟನು ಭೀಕರ ಬಾಣವ
ಸಾಗಿತು ಅದುವೇ ಬೆಂಕಿಯನುಗುಳುತ || ೬೬೪ ||

ಇದ್ದಿತು ಅದುವೇ ಷಣ್ಮುಖ ಕೊಟ್ಟಿಹ
ಶಕ್ತಿಯ ಆಯುಧ ಅತಿಶಯ ಭೀಕರ
ಬಡಿಯಿತು ನೇರಕೆ ಸುಗ್ರೀವನೆಡೆಗೆ
ಚೀರುತ ಬಿದ್ದನು ಧೊಪ್ಪನೆ ನೆಲಕೆ || ೬೬೫ ||

ನೋಡುತ ಈ ಪರಿ ರಾಕ್ಷಸರೆಲ್ಲರು
ಗರ್ಜನೆ ಮಾಡುತ ಸುಗ್ರೀವನೆಡೆಗೆ
ವಾನರವೀರರು ಗವಾಕ್ಷ ಗವಯರು
ಜ್ಯೋತಿಮುರ್ಖ, ನಳ, ಋಷಭರು ಅನ್ಯರು || ೬೬೬ ||

ಅಟ್ಟುತ ಬಂದರು ರಾವಣನೆದುರಿಗೆ
ತೂರುತಲಿದ್ದರು ಗಿರಿಶಿಖರಗಳನು
ರಾವಣ ಬಿಡುತಿಹ ಬಾಣಗಳೇಟಿಗೆ
ಚಿಮ್ಮುತಲಿದ್ದವು ಚೂರುಗಳಾಗುತ || ೬೬೭ ||

ತಡೆಯದೆ ರಾವಣನೇಟನು ...ಲ್ಲಿಯೆ
ಬಿದ್ದರು ಕೆಲವರು ಸರಿದರು ಕೆಲವರು
ರಾವಣನ ಬಿಟ್ಟರೆ ತಡೆಯುವರು ಯಾರೂ
ಎನ್ನುತ ಸಾಗಿದರು ವಾನರವೀರರು || ೬೬೮ ||

**ರಾವಣನ ಸಂಗಡ ಕಾದಲು ಲಕ್ಷ್ಮಣನ ಇಚ್ಛೆ**

ರಾಮನು ಬಂದನು ಕೋದಂಡಪಾಣಿ
ಜೊತೆಗೇ ಬರುತಲಿ ಲಕ್ಷ್ಮಣನೆಂದನು
ಅಣ್ಣನೆ ನಾನೇ ಕೊಲ್ಲುವೆ ಇವನನು
ನಾನೇ ಯುದ್ಧವ ಮಾಡುವೆನೆನ್ನಲು ‖ ೬೬೯ ‖

**ಲಕ್ಷ್ಮಣನಿಗೆ ಶ್ರೀರಾಮನ ಎಚ್ಚರನುಡಿ**

ಆಗಲಿ ನೀನೇ ಕದನವ ಕೆರಳಿಸು
ಆದರೆ ಬಹಳೇ ಎಚ್ಚರದಿಂದಿರು
ರಾವಣನಿರುವನು ಬಹು ಬಲಶಾಲಿಯು
ಅದ್ಭುತ ವೀರನು ಅಸಮ ತೇಜಸಿಯು ‖ ೬೭೦ ‖

ಸಿಟ್ಟಿಗೆ ಬಂದರೆ ಜಗವನೆ ಸುಡುವನು
ಯುದ್ಧದಿ ಗಮನಿಸು ಎಚ್ಚರದಿಂದಲಿ
ರಾವಣನಲ್ಲಿಯು ನ್ಯೂನತೆಗಳನು
ನಿನ್ನಲಿ ನ್ಯೂನತೆ ಬಾರದೆ ಇರಲಿ ‖ ೬೭೧ ‖

ಎಲ್ಲೆಡೆ ದೃಷ್ಟಿಯು ಚುರುಕಾಗಿರಲಿ
ಕಣ್ಣು ಬಾಣಗಳು ಅವಿರತ ಸಾಗಲಿ
ಅಂತೆಯೆ ನಿನ್ನನು ನೀನೇ ರಕ್ಷಿಸು
ಎಚ್ಚರದಿಂದಿರು ಹೇಳುವೆ ಮತ್ತೆ ‖ ೬೭೨ ‖

**ರಾವಣ-ಹನುಮಂತರ ಯುದ್ಧ**

ಹೊರಟನು ಲಕ್ಷ್ಮಣ ರಾವಣನೆದುರಿಗೆ
ರಾವಣ ಹಿಡಿದಿಹ ಉಗ್ರಚಾಪವನು
ಶರಗಳ ಜಾಲದಿ ಮುಚ್ಚಿಹ ಸೇನೆಯ
ತರಿಯುತಲಿದ್ದನು ವಾನರ ವೀರರ ‖ ೬೭೩ ‖

ಹನುಮನು ಆಗಲೆ ಬಂದನು ಅಲ್ಲಿಗೆ
ಎದುರಿಸಿ ನಿಂತನು ರಾವಣ ದೊರೆಯನು
ಬಂದಿಹೆ ನಿನ್ನನು ಕೊಲ್ಲಲು ಈಗಲೆ
ತೋರಿಸು ನಿನ್ನಯ ಶಕ್ತಿಯ ನೋಡುವೆ || ೬೭೪ ||

ಎನ್ನಲು ಅಂದನು ರಾವಣನಾಗಲೆ
ಕೋಡಗ ಹೊಡಿ ನೀ ಮೊದಲಿಗೆ ನೋಡುವೆ
ನಿನ್ನಯ ಶಕ್ತಿಯ ಪರಿಕಿಸಿ ಹೊಡೆಯುವೆ
ಎನ್ನಲು ಹನುಮನು ಅಂದನು ಕೇಳೈ || ೬೭೫ ||

ಎನ್ನಯ ಶಕ್ತಿಯ ಪರಿಚಯವಿಲ್ಲವೆ
ನೆನಪಿಸು ಕಿರಿಮಗ ಅಕ್ಷಕುಮಾರನ
ಸಿಡಿಯುತ ರಾವಣ ಹೊಡೆದನು ಎದೆಗೆ
ವಜ್ರದ ಮುಷ್ಟಿಯ ಮಾಡುತ ಕೈಯನು || ೬೭೬ ||

ಹೊಡೆತದ ರಭಸಕೆ ಹನುಮನು ಅದುರಿದ
ಆದರು ಸಹಿಸುತ ಕೊಟ್ಟನು ಏಟನು
ಏಟಿಗೆ ನಡುಗುತ ತೂಗಿದ ರಾವಣ
ಕ್ಷಣದಲಿ ಸವರಿಸಿ ಎದ್ದನು ಕೂಡಲೆ || ೬೭೭ ||

ಭಪ್ಪರೆ ಭಲರೇ ವಾನರವೀರನೆ
ಮೆಚ್ಚಿದೆ ನಿನ್ನಯ ಶಕ್ತಿಯ ಸಾಹಸ
ಎನ್ನಲು ಹನುಮನು ರಾವಣ ರಾಜನೆ
ಯುದ್ಧವ ಮಾಡೈ ಹೊಗಳಿಕೆ ಬೇಡಾ || ೬೭೮ ||

ಎನ್ನಲು ರಾವಣ ಸಿಟ್ಟಿನ ಭರದಲಿ
ಕೊಟ್ಟನು ಏಟನು ಎದೆಯಲಿ ಹನುಮಗೆ
ಹನುಮಗೆ ಬಂದಿತು ಬವಳಿಯು ಆಗಲೆ
ತತ್ತರಿಸುತ್ತಲಿ ನಿಂತನು ಅಲ್ಲಿಯೆ || ೬೭೯ ||

ನೋಡುತ ಈ ಪರಿ ನಡೆದನು ರಾವಣ
ತಡೆದನು ನೀಲನ ಭೀಕರ ಬಾಣದಿ
ಆಗಲೆ ಹನುಮನು ಬವಳಿಯ ಕಳೆಯುತ
ನೋಡಿದ ರಾವಣನೆಲ್ಲಿಹನೆಂದು || ೬೮೦ ||

ನೋಡುತ ಆತನು ನೀಲನ ಸಂಗಡ
ಯುದ್ಧವ ಮಾಡುತಲಿರುವದು ಕಾಣುತ
ಅಂದನು ರಾವಣ ಈಗಿನ ಸಮಯದಿ
ನಿನ್ನಯ ಸಂಗಡ ಯುದ್ಧವ ಮಾಡೆನು || ೬೮೧ ||

**ರಾವಣನೊಂದಿಗೆ ನೀಲನ ಹುಡುಗಾಟ, ರಾವಣನ ಕೋಪ**

ಆಗಲಿ ಬರುವೆನು ನಂತರ ನಾನು
ನೀಲನು ತೂರುವ ಬಂಡೆಯ ಸೀಳಿದ
ನಂತರ ನೀಲನು ಅತಿಶಯ ಚಿಕ್ಕದು
ದೇಹವ ಮಾಡುತ ಕಾಣದೆ ಯಾರಿಗು || ೬೮೨ ||

ಜಿಗಿದನು ನೇರಕೆ ರಾವಣ ಧ್ವಜಕೆ
ಹಾಗೆಯೆ ಜಿಗಿದನು ಬಿಲ್ಲಿನ ತುದಿಗೆ
ಬಿಲ್ಲಿನ ತುದಿಯಿಂ ಕಿರೀಟ ತುದಿಗೆ
ಕಿರೀಟ ತುದಿಯಿಂ ಬಿಲ್ಲಿನ ತುದಿಗೆ || ೬೮೩ ||

ಈ ಪರಿ ಮೋಜನು ಮಾಡುವ ನೀಲನ
ಕಾಣುತ ವಾನರ ವೀರರು ಎಲ್ಲರು
ಅಲ್ಲದೆ ಲಕ್ಷ್ಮಣ ರಾಮರು ಕೂಡಾ
ನೋಡುತಲಿದ್ದರು ಅಚ್ಚರಿ ಪಡುತಲಿ ॥ ೬೮೪ ॥

ಎಷ್ಟೋ ವೀರರು ನಕ್ಕರು ಕೂಡಾ
ರಾವಣನೇಟಿಗೆ ಸಿಗದಲೆ ಜಿಗಿಯುವ
ನೀಲನ ನೋಡುತ ರಾವಣ ಕೂಡಾ
ಅಚ್ಚರಿ ಪಟ್ಟನು ಸಿಟ್ಟಿಗೆ ಬಂದನು ॥ ೬೮೫ ॥

ಕೊನೆಯಲಿ ನೀಲನ ಕೊಲ್ಲಲು ಇಚ್ಛಿಸಿ
ಅಗ್ನಿಯ ಅಸ್ತ್ರವ ಬಿಟ್ಟನು ಅವನಿಗೆ
ನಟ್ಟಿತು ಉರಿಯುವ ಅಸ್ತ್ರವು ಎದೆಯಲಿ
ಬಿದ್ದನು ನೆಲದಲಿ ಧೊಪ್ಪನೆ ಧ್ವಜದಿಂ ॥ ೬೮೬ ॥

ಅಗ್ನಿಯ ಪುತ್ರನು ಇದ್ದುದು ಕಾರಣ
ಪ್ರಾಣವು ಹೋಗದೆ ಮೂರ್ಛಿತನಾದನು
ಗುಡುಗುತ ರಾವಣ ಮುಂದಕೆ ನಡೆದನು
ಎದುರಿಗೆ ಬಂದನು ಲಕ್ಷ್ಮಣನಾಗಲೆ ॥ ೬೮೭ ॥

## ರಾವಣ ಲಕ್ಷ್ಮಣರ ಯುದ್ಧ

ರಾಕ್ಷಸ ವರನೇ ನಿನ್ನಯ ಜೊತೆಗೇ
ಯುದ್ಧವ ಮಾಡಲು ಬಂದಿಹೆ ನಾನು
ಎನ್ನಲು ರಾವಣನೆಂದನು ಆಗಲೆ
ಒಳ್ಳೆಯದಾಯಿತು ಹುಡುಕುತಲಿದ್ದೆನು ॥ ೬೮೮ ॥

ನೀನೆ ಬಂದಿಹೆ ಸಾವನು ಅಪ್ಪಲು
ಕಳಿಸುವೆ ನಿನ್ನನು ಮೊದಲಿಗೆ ನಾನು
ಯಮಪುರ ವಾಸಕೆ ಹೋಗುತ ನೀನು
ರಾಮನ ದಾರಿಯ ಕಾಯುತ ಕುಳಿತಿರು || ೬೮೯ ||

ಲಕ್ಷ್ಮಣನೆಂದನು ರಾವಣ ಸಾಕಿದು
ಆತ್ಮಸ್ತುತಿಯದು ಕೆಲಸಕೆ ಬಾರದು
ಬಂದಿಹೆ ಯುದ್ಧಕೆ ಸಿದ್ಧನು ಆಗುತ
ಆಗಲಿ ತೋರಿಸು ನಿನ್ನಯ ಬಲವನು || ೬೯೦ ||

ಕರೆದನು ರಾವಣ ಶರಗಳ ಮಳೆಯನು
ಲಕ್ಷ್ಮಣನೆಲ್ಲವ ಛೇದಿಸುತಿದ್ದನು
ಅಲ್ಲದೆ ಬಿಟ್ಟನು ಇನ್ನೂ ಕೆಲವನು
ಮುರಿದನು ಅವುಗಳ ರಾವಣ ನಡುವೆಯೆ || ೬೯೧ ||

ರಾವಣ ಬಿಟ್ಟನು ಹರಿತದ ಬಾಣವ
ಬಡಿಯಿತು ನೆತ್ತಿಗೆ ಬವಳಿಯು ಬಂದಿತು
ಕೈಯಲಿ ಬಿಲ್ಲದು ಸಡಲಿತು ಕೂಡಲೆ
ಹಾಗೆಯೆ ಚೇತನ ಹೊಂದುತ ಲಕ್ಷ್ಮಣ || ೬೯೨ ||

ಬಿಟ್ಟನು ಮೂರೇ ನಿಶಿತ ಬಾಣಗಳ
ಏಟಿಗೆ ರಾವಣ ಮೂರ್ಛಿತನಾದನು
ಕೂಡಲೆ ಮೂರ್ಛೆಯ ತಿಳಿಯುತ ಎದ್ದನು
ಸಿಟ್ಟಲಿ ತೆಗೆದನು ಶಕ್ತಿಯ ಆಯುಧ || ೬೯೩ ||

ಬ್ರಹ್ಮನು ಕೊಟ್ಟಿಹ ಅಸ್ತ್ರವು ಅದುವೇ
ತಡೆಯಲು ಯಾರಿಗು ಸಾಧ್ಯವೆ ಇಲ್ಲವು
ಬಿಟ್ಟನು ಬಾಣವ ರಾವಣ ಅತಿಬಲ
ಬಂದಿತು ಉರಿಯುತ ಲಕ್ಷ್ಮಣನೆಡೆಗೆ || ೬೯೪ ||

ಲಕ್ಷ್ಮಣ ಬಿಟ್ಟನು ಎಷ್ಟೋ ಶರಗಳ
ತಡೆಯಲು ಬಾಣವ ಆದರು ಸಿಲ್ಲದು
ಕೊನೆಯಲಿ ನಟ್ಟಿತು ಲಕ್ಷ್ಮಣನೆಡಗೈ
ಉರುಳಿದ ಲಕ್ಷ್ಮಣ ಹೊಡೆತವ ತಾಳದೆ || ೬೯೫ ||

ರಾವಣ ನೋಡಿದ ಲಕ್ಷ್ಮಣ ದೇಹವ
ಎತ್ತುತ ದೇಹವ ಒಯ್ಯಲು ಇಚ್ಛಿಪ
ನೋಡುತ ಈ ಪರಿ ಬಂದನು ಹನುಮನು
ಕೊಟ್ಟನು ಮುಷ್ಟಿಯ ಏಟನು ಎದೆಗೆ || ೬೯೬ ||

ರಾವಣ ಬಿದ್ದನು ಏಟನು ತಾಳದೆ
ನೆತ್ತರ ಕಾರುತ ವೊಳಕಾಲೂರುತ
ಹಾಗೆಯೆ ಏಳಲು ತಲೆಯದು ಸುತ್ತಿತು
ಸುಮ್ಮನೆ ಕುಳಿತನು ರಥದಲಿ ಆತನು || ೬೯೭ ||

ಅಲ್ಲಿಯೆ ಬಂದಿತು ಬವಳಿಯು ಆಗಲೆ
ಹಾಗೆಯೆ ಅಲ್ಲಿಯೆ ಮೂರ್ಛಿತನಾದನು
ಹನುಮನು ಎತ್ತುತ ಲಕ್ಷ್ಮಣ ದೇಹವ
ಒಯ್ದನು ಕೂಡಲೆ ರಾಮನ ಕಡೆಗೆ || ೬೯೮ ||

ಮೂರ್ಛೆಯು ತಿಳಿಯುತ ರಾವಣನೇಳುತ
ಯುದ್ಧವ ಹೂಡಿದ ಇನ್ನೂ ನಿಖರದ
ತಡೆಯದೆ ಕಪಿಗಳು ಓಡುತಲಿರುವುದ
ಕಾಣುತ ರಾಮನು ಬಂದನು ತಾನೇ || ೧೯೯ ||

## ರಾಮ-ರಾವಣರ ಯುದ್ಧ

ಹನುಮನು ಎಂದನು ರಾಮಗೆ ಆಗಲೆ
ಎನ್ನಯ ಭುಜವನು ಏರಿರಿ ನೀವು
ಹಾಗೆಯೆ ಯುದ್ಧವ ಮಾಡಿರಿ ನೀವು
ಎನ್ನಲು ಒಪ್ಪುತ ರಾಮನು ಏರಿದ || ೨೦೦ ||

ಹನುಮನ ಗರ್ಜನೆ ಕೇಳುತ ರಾವಣ
ಬಿಟ್ಟನು ಶರಗಳ ಹನುಮನ ದೇಹಕೆ
ಹನುಮನು ಗಾಸಿಯು ಆದುದ ಕಾಣುತ
ರಾಮನು ಶರಗಳ ಬಿಡುತಲಿ ಕಡಿದನು || ೨೦೧ ||

ರಥ ಚಕ್ರ ಕುದುರೆ ಧ್ವಜ ಪತಾಕೆಗಳ
ಅಲ್ಲದೆ ಕೊಂದನು ರಾವಣ ಸಾರಥಿ
ಕೊಟ್ಟನು ಭೀಕರ ಬಾಣದ ಏಟನು
ರಾವಣನೆದೆಗೇ ಕುಸಿದನು ರಾವಣ || ೨೦೨ ||

ಜಾರಿತು ಧನುವದು ರಾವಣ ಕೈಯಲಿ
ರಾಮನು ಹಿರಿದನು ಚಂದ್ರಾಕೃತಿ ಶರ
ನೋಡುತ ರಾವಣ ಪರಿಯನು ಆತನು
ಬಿಟ್ಟನು ಬಾಣವ ಕಿರೀಟಕೆ ನೇರ || ೨೦೩ ||

### ಬಳಲಿದ ರಾವಣನಿಗೆ ಲಂಕೆಗೆ ಹೋಗಲು ಶ್ರೀರಾಮನ ಸಲಹೆ

ಭೇದಿಸಿ ಕಿರೀಟ ಉರುಳಿತು ಕೆಳಗಡೆ
ರಾಮನು ಅಂದನು ರಾವಣ ಕೇಳೈ
ಭೀಕರ ಯುದ್ಧವ ಮಾಡಿದೆ ನಿಜಕೂ
ಕೊಂದಿಹೆ ಅಸಂಖ್ಯ ಕಪಿವರ ವೀರರ ॥ ೨೦೪ ॥

ಬಳಲಿದೆ ಅತಿಶಯ ಕಾಣುತಲಿರುವದು
ಇಂತಹ ಸಮಯದಿ ಯುದ್ಧವು ಸಲ್ಲದು
ಒಪ್ಪಿಗೆಯಿರುವದು ಹೋಗೆಲೊ ಲಂಕೆಗೆ
ವಿಶ್ರಮ ಹೊಂದುತ ಬಾರೆಲೊ ನಾಳೆಗೆ ॥ ೨೦೫ ॥

ನವನವ ರಥವನು ಧನುವನು ಹೊಂದುತ
ನಾಳೆಗೆ ಬಂದರೆ ತೋರುವೆ ನಿನಗೆ
ಎನ್ನಯ ಶೌರ್ಯವ ಶಕ್ತಿಯ ಬಲವನು
ಕೇಳುತ ಈ ನುಡಿ ರಾವಣ ಮರಳಿದ ॥ ೨೦೬ ॥

### ರಾವಣನ ಕಳವಳ, ಹಿಂದಿನ ಘಟನೆಗಳ ಸ್ಮರಣ

ರಾವಣ ಮನದಲಿ ಆಯಿತು ಚಿಂತೆಯು
ದರ್ಪವು ಅಳಿಯಿತು ಅಂಜಿಕೆ ಹುಟ್ಟಿತು
ಜೀವನದಲ್ಲಿಯೆ ಮೊದಲನೆ ಅಪಜಯ
ಕರೆಯುತ ರಾಕ್ಷಸ ಭಟರನು ಅಂದನು ॥ ೨೦೭ ॥

ಎನ್ನಯ ತಪವದು ವ್ಯರ್ಥವು ಆಯಿತೆ
ಮಾನವನೊಬ್ಬನು ಗೆದ್ದನೆ ನನ್ನನು
ಬ್ರಹ್ಮನು ಆಡಿದ ಮಾತೇ ದಿಟವೇ
ಮಾನವನಿಂದಲೆ ಭಯವಿದೆ ಎಂಬುದು ॥ ೨೦೮ ॥

ದೇವರು ದಾನವ ಗಂಧರ್ವರಿಂದ
ಯಕ್ಷರು ರಾಕ್ಷಸ ಪನ್ನಗರಿಂದಲು
ಎನ್ನಯ ಮರಣವು ಆಗಲೆ ಬಾರದು
ಎನ್ನುತ ಪಡೆದೆನು ವರವನು ಆಗಲೆ || ೭೮೯ ||

ಆದರೆ ಮಾನವನಿಂದಲಿ ಮಾತ್ರನೆ
ಸಾಯುದ ವರವನು ಕೇಳಲೆ ಇಲ್ಲಾ
ಹಿಂದೆ ಇಕ್ಷ್ವಾಕು ವಂಶಜ ರಾಜನು
ಅನರಣ್ಯನೆಂಬ ನರೇಶ ಹೇಳಿದ || ೭೧೦ ||

ಮಾತೇ ಇಂದಿಗು ಸತ್ಯವು ಆಯಿತೆ
ಅಂದಿಗೆ ಅಂದುದು ಇಂದಿಗು ನೆನಪಿದೆ
ಎನ್ನಯ ವಂಶದಿ ಹುಟ್ಟಿದ ಕುವರನು
ಕೊಲ್ಲುವ ನಿನ್ನನು ಎಲ್ಲರ ಸಹಿತದಿ || ೭೧೧ ||

ಎಂದಿಹ ಶಾಪವು ಫಲಿಸಿತೆ ಇಂದಿಗೆ
ವೇದವತಿಯನು ಒಲದಿಂ ಭೋಗಿಸೆ
ಸಿಟ್ಟಲಿ ಅಂದಳು ಮುಂದಿನ ಜನ್ಮದಿ
ನಾನೇ ಕೊಲ್ಲುವೆ ನಿನ್ನನು ದುರುಳನೆ || ೭೧೨ ||

ಎಂದಿಹ ಮಾತೇ ನಿಜವದು ಆಯಿತೆ
ಅವಳೇ ಜನಕಜೆ ಇರುವಳೊ ಏನೋ
ಪಾರ್ವತಿ ನಂದಿಯು ರಂಭೆಯು ಮತ್ತೂ
ವರುಣನ ಪುತ್ರಿಯು ಪುಂಜಿಕಸ್ಥಲೆಯು || ೭೧೩ ||

ಅಂದುದು ಎಲ್ಲವು ನಿಜವೇ ಆಯಿತು
ತಪೋಬಲಯುತರ ಶಾಪವು ಎಂದೂ
ಹುಸಿಯೆಂದು ಆಗದು ತಿಳಿಯಿತು ಈಗಲೆ
ಕಾರಣ ಎಲ್ಲರು ಎಚ್ಚರವಹಿಸಿರಿ || ೭೧೪ ||

**ಕುಂಭಕರ್ಣನನ್ನು ಎಚ್ಚರಿಸಲು ರಾವಣನ ಆಜ್ಞೆ**

ಕೋಟೆಯ ಗೋಡೆಯ ಬುರುಜುಗಳೆಲ್ಲೆಡೆ
ಸರ್ಪದ ದರ್ಪದ ಕಾವಲು ಇರಲಿ
ದೇವದಾನವರ ದರ್ಪವ ಮುರಿದಿಹ
ಕುಂಭಕರ್ಣನನು ಎಬ್ಬಿಸಿರೀಗಲೆ || ೭೧೫ ||

ಬ್ರಹ್ಮನ ಶಾಪದಿ ಮಲಗಿಹನೀಗಲು
ಮಲಗುವನಾತನು ತಿಂಗಳುಗಟ್ಟಲೆ
ಮಲಗುತ ಕಳೆದಿಹ ಒಂಬತ್ತು ಮಾಸ
ಬೇಗನೆ ಎಬ್ಬಿಸಿ ತಿಳಿಸಿರಿ ಅವನಿಗೆ || ೭೧೬ ||

ಯುದ್ಧದ ಸುದ್ದಿಯು ಎಲ್ಲವು ಬಿಡದಲೆ
ಕೂಡಲೆ ಹೊರಟರು ರಕ್ಕಸರೆಲ್ಲರು
ಕುಂಭಕರ್ಣನನು ಎಬ್ಬಿಸಲೆಂದು
ಜೊತೆಗೇ ಒಯ್ದರು ವಾದ್ಯಪದಾರ್ಥವ || ೭೧೭ ||

**ಕುಂಭಕರ್ಣನನ್ನು ಎಚ್ಚರಿಸುವದು**

ಪರ್ವತ ಪ್ರಾಯದಿ ಬಿದ್ದಿದೆ ದೇಹವು
ಶ್ವಾಸೋಚ್ಛ್ವಾಸದ ರಭಸವ ಕೇಳಲು
ಬರುವದು ನೆನಪಿಗೆ ಬಿರುಗಾಳಿಯದು
ಬಾಯಿಯು ಇರುವದು ಪಾತಾಳಗುಹೆಯು || ೭೧೮ ||

ಬಿದ್ದಿದೆ ದೇಹವು ಯೋಜನ ಉದ್ದಕೆ
ಮಾಂಸದ ರಾಶಿಯು ಏರಿಸಿ ಒದಿಯಲಿ
ಕೂಗಿದರೆಲ್ಲರು ಪರಾಕು ಎನ್ನುತ
ಆದರು ಏಳನು ಕುಂಭನು ಮಾತ್ರ ॥ ೨೧೯ ॥

ಗುಡುಗುವ ತೆರದಲಿ ಕೂಗಿದರೆಲ್ಲರು
ಶಂಖವ ಊದುತ ಕುಣಿದರು ಎಲ್ಲರು
ಆರಚಿದರೆಲ್ಲರು ಗುದ್ದುತ ಸುತ್ತಲು
ಆದರು ಏಳನು ಕುಂಭನು ಮಾತ್ರ ॥ ೨೨೦ ॥

ಬಡಿಯುತ ಕೈಯನು ಗರ್ಜನೆ ಮಾಡುತ
ಭುಸುಂಡಿ ಮುಸಲವ ಗದೆಯನು ಬೀಸುತ
ಹೊಡೆದರು ತಿವಿದರು ಸುತ್ತಲು ಎಲ್ಲರು
ಆದರು ಏಳನು ಕುಂಭನು ಮಾತ್ರ ॥ ೨೨೧ ॥

ಸೊಂಟವ ಕಟ್ಟುತ ಮೃದಂಗ ಬಡಿಯುತ
ತಮಟೆ ಭೇರಿಗಳ ಡೊಳ್ಳನು ಹೊಡೆಯುತ
ಕೇಕೆಯ ಹಾಕಿದರೆಲ್ಲರು ಸುತ್ತಲು
ಆದರು ಏಳನು ಕುಂಭನು ಮಾತ್ರ ॥ ೨೨೨ ॥

ನಂತರ ತಂದರು ಆನೆಯ ಒಂಟೆಯ
ಅಲ್ಲದೆ ಕತ್ತೆಯ ಕುದುರೆಯ ಕೂಡಾ
ತಂದರು ಇನ್ನೂ ಎಷ್ಟೋ ಪ್ರಾಣಿಯ
ಹೊಡೆದರು ಅವುಗಳ ಚಾಟಿಗಳಿಂದಲಿ ॥ ೨೨೩ ॥

ಕುದುರೆಯ ಕೆನೆತವು ಒಂಟೆಯ ಅರಚಿಕೆ
ಕತ್ತೆಯ ಕಿರುಚಿಕೆ ಆನೆಯ ಘೀಂಕರ
ವಾದ್ಯದ ಘೋಷಣೆ ರಕ್ಕಸ ಕೂಗು
ಅಲ್ಲದೆ ಹೊಡೆದರು ಸುತ್ತಲು ಎಲ್ಲರು || ೭೨೪ ||

ಕೋಲಾಹಲದಲಿ ಮುಳುಗಿತು ಲಂಕೆಯು
ಸಪ್ಪಳದಿಂದಲಿ ನಡುಗಿತು ಲಂಕೆಯು
ಶ್ರಮವದು ಎಲ್ಲವು ಆಯಿತು ವ್ಯರ್ಥವು
ಆದರು ಏಳನು ಕುಂಭನು ಮಾತ್ರ || ೭೨೫ ||

ಸಿಟ್ಟಲೆ ರಕ್ಕಸರೆಲ್ಲರು ಆಗಲೆ
ಕಿತ್ತರು ತಲೆಯಲಿ ಕೂದಲು ಕೆಲವರು
ಶೂಲವ ಚುಚ್ಚಿದರೆಷ್ಟೋ ಗಲ್ಲಕೆ
ಸಾವಿರ ಸಾವಿರ ಕೊಡದಲಿ ನೀರನು || ೭೨೬ ||

ತುಂಬುತ ಸುರುವಿದರಾಗಲೆ ಕಿವಿಯಲಿ
ಸುತ್ತಿಗೆಯಿಂದಲಿ ಹೊಡೆದರು ತಲೆಗೆ
ಬಂಡೆಯ ಏಟನು ಕೊಟ್ಟರು ಎದೆಗೆ
ಆದರು ಏಳನು ಕುಂಭನು ಮಾತ್ರ || ೭೨೭ ||

ಕೊನೆಯಲಿ ತಂದರು ಸಾವಿರ ಗಜಗಳ
ಬಿಟ್ಟರು ಮೈಯಲಿ ತಿರುಗಲು ಅವುಗಳ
ಆಗಲೆ ಅರಿತನು ಮೈಯನು ತಟ್ಟುತ
ಯಾರೋ ತನ್ನನು ಎಬ್ಬಿಸುತಿರುವರು || ೭೨೮ ||

ಬಾಯನು ತೆರೆಯುತ ಆಕಳಿಸಿದನು
ಮೆಲ್ಲನೆ ಎಚ್ಚರವಾಗುತ ಎದ್ದನು
ಬದಿಯಲಿ ಬಿದ್ದಿಹ ಮಾಂಸದ ಪರ್ವತ
ನೋಡುತ ಹಾಕಿದ ಬಾಯಿಗೆ ಒಮ್ಮೆಲೆ || ೭೨೯ ||

ಕುಡಿದನು ರಕ್ತದ ಕೊಡಗಳನೆಲ್ಲವ
ಹರವಿಯಲಿಟ್ಟಿಹ ಕೊಬ್ಬನು ತಿಂದನು
ಹೆಂಡವ ಕುಡಿಯುತ ನಾಲಿಗೆ ಸವರಿದ
ತಿಳಿದರು ಎಲ್ಲರು ತೃಪ್ತನು ಆಗಿಹ || ೭೩೦ ||

ಆಗಲೆ ಎದುರಿಗೆ ಬಂದರು ಭಟರು
ಏನಿದು ಭಟರೇ ಬಂದುದು ಏಕೆ
ನಿದ್ರೆಯ ಮಾಡಲು ಕಿಟಿಕಿಟಿ ಏಕದು
ಅಣ್ಣನು ಕುಶಲನು ಇರುವನು ಅಲ್ಲವೆ || ೭೩೧ ||

ಸುಮ್ಮನೆ ಎನ್ನನು ಎಬ್ಬಿಸಲಾರನು
ತೊಂದರೆ ಯಾವುದೊ ಇರಲೇ ಬೇಕು
ಚಿಂತೆಯ ಬಿಡುತಲಿ ಕಾರಣ ಹೇಳಿರಿ
ಎನ್ನಲು ಅಂದನು ರಕ್ಕಸನೊಬ್ಬನು || ೭೩೨ ||

ದೇವರ ಕಡೆಯಿಂ ತೊಂದರೆಯಿಲ್ಲವು
ಮಾನವನೊಬ್ಬನ ಕಾರಣದಿಂದಲಿ
ಲಂಕೆಗೆ ಬಂದಿದೆ ಸಂಕಟವೀಗಲೆ
ವಾನರ ವೀರರು ಮುತ್ತಿಹರೆಲ್ಲೆಡೆ || ೭೩೩ ||

ಸೀತೆಯು ಕಾರಣ ರಾಮನು ಕೋಪದಿ
ಬಂದಿಹ ವಾನರ ಸೇನೆಯ ಸಹಿತದಿ
ಹಿಂದಕೆ ಒಂದೇ ಕಪಿಯದು ಬಂದು
ಸುಟ್ಟಿತು ಎಮ್ಮಯ ಸುವರ್ಣ ಲಂಕೆಯ ॥ ೭೩೪ ॥

ಎಮ್ಮಯ ರಾಜನು ಯುದ್ಧವ ಮಾಡಿದ
ರಾಮನ ಕೈಯಲಿ ಹತಬಲನಾದನು
ರಾವಣ ಲಂಕೆಗೆ ಹೋಗುತ ನೀನು
ವಿಶ್ರಮ ಹೊಂದುತ ಬಾರೆಲೊ ಅಂದನು ॥ ೭೩೫ ॥

ರಾಜಗೆ ತಿಳಿಯದು ಇಂತಹ ಅಪಜಯ
ಕೇಳುತ ಈ ನುಡಿ ಎದ್ದನು ಗುಡುಗುತ
ವಾನರ ಸೇನೆಯ ತಿನ್ನುವೆ ಎಲ್ಲವ
ರಾಮ ಲಕ್ಷ್ಮಣರ ಕೊಲ್ಲುವೆ ಈಗಲೆ ॥ ೭೩೬ ॥

ನಂತರ ಹೋಗುವೆ ಅಣ್ಣನ ಕಾಣಲು
ಎನ್ನಲು ಬಂದನು ಮಹೋದರನಾಗ
ಮೊದಲಿಗೆ ಕಾಣುವ ರಾಜನ ಈಗಲೆ
ಯೋಚಿಸಿ ನಂತರ ಯುದ್ಧವ ಮಾಡುವ ॥ ೭೩೭ ॥

## ಕುಂಭಕರ್ಣನು ರಾವಣನನ್ನು ಕಾಣಲು ಹೋಗುವುದು

ಹಾಗೆಯೆ ಆಗಲಿ ಎನ್ನುತ ಕುಂಭನು
ಎದ್ದನು ಕೂಡಲೆ ಸಿದ್ಧನು ಆಗುತ
ಮದ್ಯವ ಕುಡಿದನು ಸಾವಿರ ಕೊಡಗಳ
ಮತ್ತನು ಆಗುತ ನಡೆದನು ಮುಂದಕೆ ॥ ೭೩೮ ॥

ರಾಜಮಾರ್ಗದಲಿ ಎರಡೂ ಕಡೆಯಲಿ
ಮಣಿಯುತಲಿದ್ದರು ರಕ್ಕಸ ಪ್ರಜರು
ಎತ್ತರ ಅತಿಶಯ ಇದ್ದುದು ಕಾರಣ
ಕೋಟೆಯ ಮೇಗಡೆ ಕಾಣುತಲಿದ್ದನು || ೭೩೯ ||

ಕಪಿವರರೆಲ್ಲರು ನೋಡಿದರಾಗಲೆ
ವಾನರರೆಷ್ಟೋ ಅಂಜಿದರಾಗಲೆ
ಕೆಲವರು ಹೋದರು ರಾಮನ ಕಡೆಗೆ
ತಿಳಿಸಿದರವನಿಗೆ ಅದ್ಭುತ ರಾಕ್ಷಸ || ೭೪೦ ||

ರಾಮನು ನೋಡಿದ ಲಂಕೆಯ ಕಡೆಗೆ
ಕಂಡಿತು ಕುಂಭನ ಕಿರೀಟದ ತಲೆಯು
ಕೇಳಿದನಾಗಲೆ ವಿಭೀಷಣನನ್ನು
ಯಾರಿಹ ಈತನು ಪರ್ವತ ದೇಹಿಯು || ೭೪೧ ||

ಇಂತಹ ಬೃಹದಾಕಾರದ ದೇಹಿಯು
ಕಂಡೇ ಇಲ್ಲವು ಇಂದಿನ ವರೆಗೂ
ಕಿರೀಟ ಧರಿಸಿಹ ಪಿಂಗಳ ನೇತ್ರನು
ಮಿಂಚಿನ ಅಂಚಿನ ಮೋಡದ ತೆರದಲಿ || ೭೪೨ ||

ಇರುತಿಹ ರಕ್ಕಸನಿವನನು ನೋಡುತ
ಕಪಿಗಳು ಎಲ್ಲರು ಓಡುತಲಿರುವರು
ಬೃಹದಾಕಾರದ ಈತನ ನೋಡಲು
ಭೂಮಿಯ ಧ್ವಜಸ್ತ್ರೋ ಎನ್ನುತ ಕಾಣುವ || ೭೪೩ ||

ವಿಭೀಷಣನಿಂದ ಶ್ರೀರಾಮನಿಗೆ ಕುಂಭಕರ್ಣನ ಪರಿಚಯ

ರಾಮನೆ ಕೇಳೈ ಕುಂಭಕರ್ಣನಿವ
ವಿಶ್ರವಸ್ಸಿನಾ ಪುತ್ರನು ಇರುವನು
ಮಹಾಪ್ರತಾಪಿಯು ಅತಿಬಲ ಶೂರನು
ದೇಹದಿ ಇವನನು ಯಾರೂ ಮೀರರು ॥ ೭೪೪ ॥

ಯುದ್ಧದಿ ಇಂದ್ರನ ಯಮನನು ಸೋಲಿಸಿ
ಗೆದ್ದಿಹ ಬಹುಬಲ ವೀರನು ಇರುವನು
ದೇವ ದಾನವರ ಯಕ್ಷ ಭುಜಂಗರ
ಗಂಧರ್ವ ಕಿನ್ನರ ವಿದ್ಯಾಧರರನು ॥ ೭೪೫ ॥

ಗೆದ್ದಿಹನೀತನು ವಿಕಟ ನೇತ್ರನು
ಇತರರು ರಕ್ಕಸ ವೀರರು ಶೂರರು
ಕೇವಲ ವರಗಳ ಕಾರಣದಿಂದಲೆ
ಈತನು ಮಾತ್ರವೆ ದೇಹದಿ ಬಲಯುತ ॥ ೭೪೬ ॥

ಕುಂಭಕರ್ಣನ ವೃತ್ತಾಂತ

ಈತನು ಹುಟ್ಟಿದ ಸಂಗತಿ ಕೇಳೈ
ಹುಟ್ಟಿದ ಕೂಡಲೆ ಹಸಿವೆಯೆ ಹಸಿವೆಯು
ಸಿಕ್ಕಿದ ಪ್ರಾಣಿಗಳೆಲ್ಲವ ತಿಂದನು
ಪ್ರಜೆಗಳು ಹೆದರುತ ಓಡಿದರೆಲ್ಲರು ॥ ೭೪೭ ॥

ಕಾಣುತ ಇಂದ್ರನ ತಿಳಿಸಿದರವನಿಗೆ
ವಜ್ರಾಯುಧದಿಂ ಹೊಡೆದನು ಇಂದ್ರನು
ಜಗ್ಗದೆ ಕುಗ್ಗದೆ ಐರಾವತವನು
ಹಿಡಿಯುತ ಕಿತ್ತನು ಕೋರೆಯು ಆದರದು ॥ ೭೪೮ ॥

ದಂತವ ಎತ್ತುತ ಹೊಡೆದನು ಎದೆಗೆ
ಇಂದ್ರನು ಸಡುಗಿದ ಕುಪಿತನು ಆದನು
ಆದರೆ ಏನನು ಮಾಡಲು ಆಗದು
ಇಂದ್ರನು ಹೋದನು ಬ್ರಹ್ಮನ ಹತ್ತಿರ || ೭೪೯ ||

ಜೊತೆಗೇ ಹೋಯಿತು ದೇವಗಣವೆಲ್ಲ
ತಿಳಿಸಿದರವನಿಗೆ ಕುಂಭನ ಕಾರ್ಯವ
ಪ್ರಜೆಗಳ ಭಕ್ಷಿಸಿ ಆಶ್ರಮ ಸುಡುತಲಿ
ಸ್ತ್ರೀಯರ ಮಾನವ.ಭಂಗಿಸಿ ಆತನು || ೭೫೦ ||

ಮೆರೆಯುವನೆಲ್ಲೆಡೆ ಉದ್ದಂಡನಾಗಿ
ಹೀಗೆಯೆ ಆದರೆ ತಿನ್ನುವ ಎಲ್ಲವ
ಉಳಿಯದು ಜೀವನ ರಾಶಿಯು ಒಂದೂ
ಬ್ರಹ್ಮನು ಕರೆಸಿದ ರಕ್ಕಸರೆಲ್ಲರ || ೭೫೧ ||

ನೋಡುತ ಕುಂಭನ ಪರಿಯನು ಬ್ರಹ್ಮನು
ತಿಳಿದನು ಇಂದ್ರನ ಮಾತದು ನಿಜವು
ಕೂಡಲೆ ಅಂದನು ಸಿಟ್ಟಲಿ ಆತನು
ಸತ್ತವನಂತೆಯೆ ನಿದ್ರಿಸು ಸದಾ || ೭೫೨ ||

ಶಾಪದ ವಶದಿಂ ನಿದ್ರೆಯು ಹತ್ತಿತು
ಕೂಡಲೆ ರಾವಣ ಬ್ರಹ್ಮನಿಗಂದನು
ಅಜ್ಜನೆ ಏನಿದು ನಿನ್ನಯ ಮೊಮ್ಮಗ
ಗಿಡವನು ಪೋಷಿಸಿ ಹಣ್ಣಿನ ಸಮಯದಿ || ೭೫೩ ||

ಕಡಿದರೆ ಗಿಡದಿಂ ಫಲವದು ಏನಿದೆ
ಶಾಪದ ಫಲದಿಂ ನಿದ್ರೆಯ ಮಾಡುತ
ಜೀವನ ಕಳೆದರೆ ಬದುಕುವದೇಕದು
ನಿನ್ನಯ ವಾಣಿಯು ಹುಸಿಯದು ಆಗದು || ೭೫೪ ||

ಕಾರಣ ನಿದ್ರೆಗೆ ಮಿತಿಯನು ಹಾಕೈ
ಕೇಳುತ ಈ ನುಡಿ ಬ್ರಹ್ಮನು ಅಂದನು
ಆಗಲಿ ಮಲಗಲಿ ಆರು ಮಾಸಗಳ
ನಂತರ ಏಳಲಿ ಒಂದೇ ದಿನವು || ೭೫೫ ||

ಅಂದೇ ತಿನ್ನಲಿ ಸಿಕ್ಕಿದುದೆಲ್ಲವ
ಬಾಯಿಯು ಇವನದು ಜ್ವಲಿಸುವ ಅಗ್ನಿಯು
ಮರುದಿನದಿಂದಲಿ ಮಲಗಲಿ ಮತ್ತೆ
ಕಳೆಯಲಿ ತಿಂಗಳು ಆರೂ ಮತ್ತೆ || ೭೫೬ ||

ಮಲಗಿದ ಅವನನು ಎಬ್ಬಿಸಿ ರಾವಣ
ನಿನ್ನೆಯೆ ನಿನ್ನಲಿ ಸೋತಿಹ ಕಾರಣ
ಕಳಿಸುವನಿವನನು ಯುದ್ಧಕೆ ಇಂದು
ತಿನ್ನುವನೆಲ್ಲೆಡೆ ಕಪಿಬಲವನ್ನು || ೭೫೭ ||

ವಾನರರೆಲ್ಲರು ಓಡುತಲಿರುವರು
ಒಂದೆಯೆ ಉಪಾಯ ಕಾಣುವದೆನಗೆ
ಕುಂಭನು ಇರುವನು ಯಂತ್ರವು ಮಾತ್ರ
ಹೆದರಿಕೆ ಹುಟ್ಟಲು ತಂದಿಹರವನನು || ೭೫೮ ||

ಎನ್ನುತ ಕಪಿಗಳು ಎಲ್ಲರು ತಿಳಿದರೆ
ಉಳಿವರು ಓಡದೆ ಯುದ್ಧದಿ ಅವರು
ಅಂತೆಯೆ ತಿಳಿಸಿರಿ ವಾನರ ಸೇನೆಗೆ
ಕೂಡಲೆ ರಾಮನು ಕರೆದನು ನೀಲನ || ೭೫೯ ||

**ನೀಲನಿಗೆ ಶ್ರೀರಾಮನ ಆಜ್ಞೆ**

ಅಗ್ನಿಯ ಪುತ್ರನೆ ಸೇನೆಯ ನಿಲ್ಲಿಸು
ಲಂಕೆಯ ದ್ವಾರದಿ ಕೋಟೆಯ ಮೇಲೂ
ಕಂದಕ ದಾಟುವ ಸೇತುವೆಯಲ್ಲಿಯು
ನಿಲ್ಲಿಸು ಬಲಯುತ ಯೋಧರ ಅಲ್ಲಿಯೆ || ೭೬೦ ||

ಬಂಡೆಯ ರಾಶಿಯು ಬದಿಯಲಿ ಇರಲಿ
ಗಿರಿಗಳ ಶಿಖರವು ಕೈಯಲಿ ಇರಲಿ
ನೀಲನು ರಚಿಸಿದ ಸೇನೆಯ ಹಾಗೆಯೆ
ಪರ್ವತ ಪ್ರಾಯದ ಕಪಿವರ ನಾಲ್ವರು || ೭೬೧ ||

ಗವಾಕ್ಷ ಅಂಗದ ಶರಭ ಹನುಮಂತ
ನಿಂತರು ನಾಲ್ಕೂ ದ್ವಾರಕೆ ಎದುರಿಗೆ
ಕೇಕೆಯ ಹಾಕುತ ಗರ್ಜನೆ ಮಾಡುತ
ನಿಂತಿತು ವಾನರ ಸೇನೆಯು ಉತ್ಸುಕ || ೭೬೨ ||

**ಕುಂಭಕರ್ಣನು ರಾವಣನ ಅರಮನೆಗೆ ಬಂದುದು**

ಲಂಕೆಯ ಒಳಗಡೆ ಕುಂಭನು ನಡೆದಿಹ
ರಾಜಮಾರ್ಗದಲಿ ಜೋಲಿಯ ಹೊಡೆಯುತ
ನಿದ್ದೆಯ ಮದ್ಯದ ಅಮಲಿನ ಕಾರಣ
ಸಾಸಿರ ಸಾಸಿರ ಭಟರೂ ಇರುವರು || ೭೬೩ ||

ತಲುಪಿದ ರಾವಣನರಮನೆ ಆತನು
ಚಿಂತೆಯ ಮುಖಡಲಿ ಇದ್ದನು ರಾವಣ
ಸಂತಸದಿಂದಲಿ ಬಂದನು ಎದುರಿಗೆ
ಸ್ವಾಗತಗೈಯುತ ತಮ್ಮನ ಒಪ್ಪಿದನು || ೭೬೪ ||

ಅಪ್ಪುತ ತಮ್ಮನ ಆಸನ ತೋರಿದ
ಕುಂಭನು ಅಂದನು ಅಣ್ಣನೆ ಏನಿದು
ಎನ್ನನು ಎಬ್ಬಿಸುವಂತಹ ಕಾರಣ
ಯಾರಿಗೆ ಸಾವದು ಬಂದಿದೆ ಹೇಳು || ೭೬೫ ||

ರಾವಣನು ತಮ್ಮನಿಗೆ ಯುದ್ಧಮಾಡಲು ಕೇಳುವದು

ತಮ್ಮನೆ ಕೇಳೈ ಸುಖದಲಿ ಮಲಗಿಹೆ
ದಶರಥ ಪುತ್ರನು ರಾಮನು ಬಂದಿಹ
ಸಂಗಡ ಬಂದಿಹ ಸುಗ್ರೀವರಾಜ
ವಾನರ ರಾಜನು ಸೇನೆಯ ಸಹಿತದಿ || ೭೬೬ ||

ಸಾಗರ ನೀರಿಗೆ ಸೇತುವೆ ಕಟ್ಟುತ
ಸೇನೆಯ ಸಹಿತದಿ ಬಂದಿಹರಾಗಲೆ
ಲಂಕೆಯ ಹೊರಗಡೆ ಎಲ್ಲೆಡೆ ಅವರೇ
ರಾಕ್ಷಸ ವೀರರು ಮಡಿದರು ಎಷ್ಟೋ || ೭೬೭ ||

ವಾನರ ನಾಶವು ಕಾಣದು ಎಷ್ಟು
ಬಂದಿದೆ ಇದುವೇ ಕಷ್ಟದ ಕಾಲವು
ಕಾರಣ ನಿನ್ನನು ಎಬ್ಬಿಸ ಹೇಳಿದೆ
ಲಂಕೆಯ ರಕ್ಷಣೆ ನಿನ್ನಯ ಪಾಲಿಗೆ || ೭೬೮ ||

ಹಿಂದಕೆ ಈ ಪರಿ ಕೇಳಿಯೆ ಇಲ್ಲಾ
ನಿನ್ನಯ ಎದುರಿಗೆ ನಿಲ್ಲರು ಯಾರೂ
ಶೌರ್ಯದ ಪ್ರಕಟನೆ ಬೇಕಿದೆ ಈಗೂ
ಎನ್ನಲಿ ನಿನ್ನಯ ಪ್ರೇಮವು ಅತಿಶಯ || ೨೬೯ ||

ಎನ್ನಯ ಕಾರಣ ಯುದ್ಧವ ಮಾಡು
ಎನ್ನಯ ಮತ್ತೂ ರಾಕ್ಷಸ ಕುಲದ
ಗೌರವ ಉಳಿಸುವ ಭಾರವು ನಿನ್ನದು
ನಿನ್ನನು ಬಿಟ್ಟರೆ ಯಾರೂ ಇಲ್ಲವು || ೨೭೦ ||

**ಕುಂಭಕರ್ಣನು ರಾವಣನಿಗೆ ಹಿತನುಡಿ ಹೇಳುವದು**

ಕೇಳುತ ಈ ನುಡಿ ನಕ್ಕನು ಕುಂಭನು
ಅಣ್ಣನೆ ಹಿಂದೆಯೆ ಯೋಚನೆ ಮಾಡುತ
ಬಂದಿಹ ಸ್ಥಿತಿಯನು ಊಹಿಸಿ ಇದ್ದೆವು
ಅದುವೇ ಇಂದಿಗೆ ಫಲಿಸಿದೆ ನಿಜಕೂ || ೨೭೧ ||

ಪಾಪದ ಫಲವದು ಬಂದಿದೆ ಇಂದಿಗೆ
ಸೀತೆಯ ಹರಣದ ಪರಿಣಾಮವೇನು
ಎನ್ನುವದಂತೂ ಯೋಚನೆ ಮಾಡದೆ
ಕೇವಲ ದರ್ಪದಿ ನಡೆದಿಹೆ ನೀನು || ೨೭೨ ||

ಐಸಿರಿ ಮದದಲಿ ಮುಳುಗಿಹ ಮನುಜಗೆ
ಅನೀತಿ ನೀತಿಯು ತಿಳಿಯವು ನಿಜಕೂ
ದೇಶದ ಕಾಲದ ಅರಿವನು ತಿಳಿಯದೆ
ಮಾಡುವದೆಲ್ಲವು ವ್ಯರ್ಥವು ಅಹುದು || ೨೭೩ ||

ಸಚಿವರ ಸಂಗಡ ಮಂತ್ರಾಲೋಚನೆ
ಮಾಡುತ ನಡೆಯುವ ರಾಜನೆ ಜಾಣನು
ಯೋಚನೆ ಮಾಡುತ ನಡೆಯುವ ರಾಜನು
ಬಾಳುವ ಆಳುವ ನಿಜಕೂ ಸೌಖ್ಯದಿ || ೭೭೪ ||

ಹಿತವಿಹ ಸಚಿವರು ಯಾರಿಹರೆಂಬುದು
ತಿಳಿಯುವ ರಾಜನೆ ನಿಜಕೂ ಯೋಗ್ಯನು
ಕೇವಲ ಎದುರಿಗೆ ಹೊಗಳುವ ಸಚಿವನು
ಯೋಗ್ಯನು ಅಲ್ಲವು ನಿನಗೂ ದೇಶಕು || ೭೭೫ ||

ವಿಭೀಷಣನಾಗ ಹೇಳಿದ ಮಾತದು
ನಿಜಕೂ ಯೋಗ್ಯವು ಹಾಗೆಯೆ ಮಾಡು
ಇಲ್ಲದೆ ಹೋದರೆ ತೊಂದರೆ ತಪ್ಪದು
ಹಿರಿಯನು ಇರುತಿಹೆ ತಿಳಿದುದು ಮಾಡು || ೭೭೬ ||

ರಾವಣನ ಕೆರಳಿದ ನುಡಿ

ಕೇಳುತ ಈ ನುಡಿ ರಾವಣ ಕೆರಳಿದ
ತಮ್ಮನೆ ಗುರುವಿನ ಉಪದೇಶ ಸಾಕು
ಕಳೆದುದ ಮಾತನು ಹೇಳುವದೇತಕೆ
ಆದುದು ಆಯಿತು ಹೋದುದು ಹೋಯಿತು || ೭೭೭ ||

ಇಂದಿನ ಸಮಯವ ಚಿಂತಿಸು ಈಗಲೆ
ದರ್ಪದ ಕಾರಣ ಸೊಕ್ಕಿನ ಕಾರಣ
ಭ್ರಮೆಯೋ ಬಲವನು ನಂಬಿಯೊ ಏನೋ
ಆಗಿನ ಮಾತದು ಹಿಡಿಸಲೆ ಇಲ್ಲಾ || ೭೭೮ ||

ಎನ್ನಯ ತಪ್ಪೂ ಆಗಿರಬಹುದು
ತಿದ್ದುವ ಕಾಲವು ಬಂದಿದೆ ಈಗಲೆ
ನಿನ್ನಯ ಕಾರ್ಯವು ತಿದ್ದಲಿ ಯುದ್ಧದಿ
ಕಷ್ಟದ ಕಾಲದಿ ಇರುವನು ಸ್ನೇಹಿತ || ೭೭೯ ||

ತಪ್ಪನು ಮಾಡುತ ವಿಪತ್ತು ಹೊಂದಿಹ
ಮನುಜಗೆ ಹಿತವನು ಮಾಡುವ ಬಂಧುವು
ತಿಳಿದನು ಕುಂಭನು ರಾವಣ ಮನವನು
ರಾಜನೆ ಬಿಡು ನೀ ಸಂತಾಪವನು || ೭೮೦ ||

ಎಲ್ಲಿಯ ವರೆಗೂ ಇರುವೆನೊ ನಾನು
ಅಲ್ಲಿಯ ವರೆಗೂ ಚಿಂತೆಯು ಬೇಡಾ
ವೈರಿಯ ಮುರಿಯುವೆ ಲಂಕೆಯ ಉಳಿಸುವೆ
ಒಳ್ಳೆಯ ಕಾಲದಿ ಕಷ್ಟದ ಕಾಲದಿ || ೭೮೦ ||

ಹಿತಕರ ಮಾತನು ಹೇಳುವದೊಳಿತು
ಕಾರಣ ಹೇಳಿದೆ ಹಿತಕರ ನುಡಿಯನು
ನಿನ್ನಯ ಅಭಿಮತ ಯುದ್ಧವೆ ಅಲ್ಲವೆ
ಆಗಲಿ ಹಾಗೆಯೆ ಮಾಡುವೆ ನಾನೂ || ೭೮೨ ||

**ರಾವಣನ ಇಂಗಿತದಂತೆ ಕುಂಭಕರ್ಣನ ಸಿದ್ಧತೆ**

ಅಪ್ಪಣೆ ಕೊಟ್ಟರೆ ಹೋಗುವೆನೀಗಲೆ
ಕೊಲ್ಲುವೆ ರಾಮನ ಲಕ್ಷ್ಮಣನಲ್ಲದೆ
ಸುಗ್ರೀವರಾಜ ಬೀಳುವ ರಣದಲಿ
ಯಾರೇ ಬಂದರು ಕೊಲ್ಲುವೆ ಅವರನು || ೭೮೩ ||

ಲಂಕೆಯ ಸುಟ್ಟಿಹ ಹನುಮನ ಕೊಲ್ಲುವೆ
ಸಂತಸದಿಂದಿರು ಮದ್ಯವ ಕುಡಿಯುತ
ರಾಮನ ಕಳಿಸುವೆ ಯಮಪುರವಾಸಕೆ
ಸೀತೆಯು ಉಳಿವಳು ನಿನ್ನಯ ಪಾಲಿಗೆ || ೭೮೪ ||

### ಮಹೋದರನ ಕಪಟನಾಟಕದ ಪ್ರಸ್ತಾಪ

ಕೂಡಲೆ ಎದ್ದನು ಮಹೋದರ ಸಚಿವ
ಕುಂಭನ ಮಾತನು ಖಂಡಿಸಿ ಅಂದನು
ರಾವಣ ಮಾಡಿದುದೆಲ್ಲಕೆ ಒಪ್ಪಿಗೆ
ರಾಜನ ಮಾತಿಗೆ ವಿರೋಧಬಾರದು || ೭೮೫ ||

ಅಣ್ಣಗೆ ಹೇಳುವ ಮಾತಿದು ಯೋಗ್ಯವೆ
ರಾಜನ ಆಜ್ಞೆಯೆ ಸಾಕದು ಎಮಗೆ
ಎನ್ನುತ ಅಂದನು ರಾವಣ ರಾಜಗೆ
ಹೊಳೆದಿದೆ ಉಪಾಯ ಈಗಲೆ ಒಂದು || ೭೮೬ ||

ಯುದ್ಧಕೆ ಹೋಗುತ ಬರುವೆನು ನಾನು
ಮೈಯಲಿ ಇರುವದು ರಾಮನ ಬಾಣವು
ಬರುವೆನು ಇಲ್ಲಿಗೆ ಘೋಷಣೆ ಮಾಡುತ
ಮಣಿಯುವೆ ನಿಮ್ಮಯ ಪಾದಕೆ ನಾನು || ೭೮೭ ||

ರಾಮ ಲಕ್ಷ್ಮಣರ ತಿಂದಿಹೆನೆನ್ನುತ
ಘೋಷಣೆ ಮಾಡುವೆ ಎಲ್ಲರ ಎದುರಿಗೆ
ಗೌರವ ತೋರಿಸಿ ಕಾಣಿಕೆ ಕೊಡು ನೀ
ನಂತರ ರಕ್ಕಸ ಭಟರಂದು ತಿರುಗಲಿ || ೭೮೮ ||

ಆನೆಯು ಮೇಲೆಯೆ ಲಂಕೆಯಲೆಲ್ಲೆಡೆ
ಸಾರಲಿ ರಾಮನ ಲಕ್ಷ್ಮಣ ಮರಣವ
ವಾನರ ಸೇನೆಯು ನಾಶವು ಹೊಂದಿದೆ
ಎನ್ನುತ ಡಂಗುರ ಸಾರಲಿ ಎಲ್ಲೆಡೆ || ೭೮೯ ||

ತುಷ್ಟರು ಆಗಿಹ ತರದಲಿ ನಟಿಸಿರಿ
ದಾನವ ಮಾಡಿರಿ ಯೋಧರಿಗೆಲ್ಲಾ
ಸಕಲರು ನಂಬಲಿ ರಾಮನ ಮರಣವ
ಆಗಲೆ ಸೀತೆಯು ಒಲಿಯುವ ಸಂಭವ || ೭೯೦ ||

ಸೀತೆಯು ಒಲಿದುದು ತಿಳಿದರೆ ರಾಮನು
ಹೋಗುವ ಕೂಡಲೆ ಯುದ್ಧವ ಮಾಡದೆ
ಲಂಕಾನಗರವು ರಕ್ಕಸ ಕುಲವೂ
ಉಳಿಯಲು ಮಾರ್ಗವು ಇದುವೇ ಒಂದೇ || ೭೯೧ ||

ಕುಂಭನು ಗದರಿದ ಮಹೋದರನನ್ನು
ಅಂದನು ಅಣ್ಣನೆ ಕೇಳ್ಳೈ ನೀನು
ಯುದ್ಧಕೆ ಹೋಗುವೆ ಕೊಲ್ಲುವೆ ರಾಮನ
ಸುಖದಲಿ ಜೀವನ ನಾಗಿಸು ನೀನು || ೭೯೨ ||

**ಕುಂಭಕರ್ಣನಿಂದ ಮಹೋದರನ ದೂಷಣೆ**

ತಿರುವುತ ಮುಖವನು ಮಹೋದರನೆಡೆಗೆ
ಅಂದನು ಅವನಿಗೆ ಕೇಳೆಲೋ ನೀನು
ಹೇಡಿಗಳೆಲ್ಲರು ಪಂಡಿತರಂತೆಯೆ
ಮಾತನು ಆಡಲು ಕಷ್ಟವು ಬಂದಿದೆ || ೭೯೩ ||

ರಾಜನ ಮೆಚ್ಚಿಸಲೆಂದೇ ನೀವು
ಮಾತನು ಆಡುತ ಪ್ರಿಯವನು ಮಾತ್ರ
ಹಿತವಿಹ ಮಾತನು ಆಡುವದಿಲ್ಲವು
ಸೀತೆಯ ಹರಣಕೆ ಕಾರಣ ನೀವೇ || ೭೯೪ ||

ರಕ್ಕಸ ಕುಲವನು ಉಳಿಸಲು ಈಗ
ನಿಮ್ಮಯ ತಪ್ಪನು ತಿದ್ದಲು ಕೂಡಾ
ಯುದ್ಧವ ಮಾಡುವೆ ನಾನೇ ಸದ್ಯದಿ
ಕೊಲ್ಲುತ ಅವರನು ತಿದ್ದುವೆ ತಪ್ಪನು || ೭೯೫ ||

**ಕುಂಭಕರ್ಣನಿಗೆ ರಾವಣನ ಪ್ರೋತ್ಸಾಹ**

ನಗುತಲಿ ರಾವಣ ಅಂದನು ತಮ್ಮಗೆ
ಮಹೋದರನಿವನು ಹೆದರಿಹ ರಾಮಗೆ
ಸಂಶಯವೆನಿತೂ ಇಲ್ಲವು ಇದರಲಿ
ಕಾರಣ ಅವನಿಗೆ ಯುದ್ಧವು ಬೇಡಾ || ೭೯೬ ||

ಸ್ನೇಹದಿ ಶೌರ್ಯದಿ ನಿನ್ನಯ ಸರಿಸಮ
ಯಾರೂ ಇಲ್ಲವು ಗೊತ್ತಿದೆ ನನಗೂ
ವೈರಿಯ ಗೆಲ್ಲುತ ಜಯವನು ಗಳಿಸಲು
ಎಚ್ಚರಗೊಳಿಸಿದೆ ನಿನ್ನನು ತಮ್ಮನೆ || ೭೯೭ ||

ಪಾಶವ ಶೂಲವ ಹಿಡಿಯುತ ನೀನು
ಯುದ್ಧಕೆ ಹೋದರೆ ಉಳಿವರು ಯಾರೈ
ಕಾಣುತ ನಿನ್ನನು ಓಡುವರೆಲ್ಲರು
ತಿಂದರೆ ಅವರನು ಮುಗಿಯಿತು ಯುದ್ಧವು || ೭೯೮ ||

ಕೇಳುತ ಈ ನುಡಿ ಕುಂಭಕರ್ಣನು
ಹರ್ಷದಿ ನಿಂತನು ಶೂಲವ ಹಿಡಿಯುತ
ಅಣ್ಣನೆ ಒಬ್ಬನೆ ಹೋಗುವೆ ರಣಕೆ
ಒಬ್ಬನೆ ತಿನ್ನುವೆ ವಾನರರೆಲ್ಲರ || ೭೯೯ ||

ನಿನ್ನಯ ಸೇನೆಯು ಇಲ್ಲಿಯೆ ಇರಲಿ
ಎನ್ನಲು ಅಂದನು ರಾವಣನಾಗಲೆ
ರಾಕ್ಷಸಯೋಧರು ಸುತ್ತಲು ಇರಲಿ
ವಾನರರಿರುವರು ಬುದ್ಧಿಶಾಲಿಗಳು || ೮೦೦ ||

ದೃಢತೆಯಿಂದಲಿ ಕಾದುವರೆಲ್ಲರು
ಚಪಲಗಾಮಿಗಳು ಇರುವರು ಕಾರಣ
ಅಲಕ್ಷ್ಯ ಎಂದಿಗು ತರವೇ ಅಲ್ಲವು
ವೈರಿಯ ಘಟದಲಿ ಮುಖ್ಯರ ಕೊಲ್ಲು || ೮೦೧ ||

ಎನ್ನುತ ರಾವಣ ಎದ್ದನು ಪೀಠದಿ
ರತ್ನದ ಹಾರವ ಹಾಕಿದ ತಮ್ಮಗೆ
ತೋಳಿಗೆ ತೊಡಿಸಿದ ತೋಳ್ಬಂದಿಗಳನು
ಬೆರಳಿಗೆ ಇಟ್ಟನು ಉಂಗುರಗಳನೂ || ೮೦೨ ||

ಹೊಳೆಯುವ ಮುತ್ತಿನ ಸರವನು ಹಾಕಿದ
ಪರಿಮಳ ಬೀರುವ ಮಾಲೆಯ ತೊಡಿಸಿದ
ಹೊಳೆಯುವ ಕುಂಡಲ ಎರಡನು ತೊಡಿಸಿದ
ಎದೆಯಲಿ ಮಿರುಗುವ ಸುವರ್ಣ ಕವಚವು || ೮೦೩ ||

ಅಸ್ತ್ರಕೆ ಎಂದೂ ಮಣಿಯದ ಕವಚವು
ಗರ್ಜನೆ ಮಾಡುತ ಎದ್ದನು ಕುಂಭನು
ಅಣ್ಣನು ಮಾಡಿದ ಆಶೀರ್ವಾದವ
ಹಿಂದೆಯೆ ಹೊರಟರು ರಾಕ್ಷಸ ಭಟರೂ || ೮೦೪ ||

**ಕುಂಭಕರ್ಣನು ಯುದ್ಧಕ್ಕೆ ಹೊರಟನು**

ಭೇರಿಯ ಶಬ್ದವು ತುಂಬಿತು ಎಲ್ಲೆಡೆ
ಕತ್ತೆಯು ಕುದುರೆಯು ಒಂಟೆಯು ಆನೆಯ
ಹತ್ತಿದರೆಷ್ಟೋ ರಕ್ಕಸವೀರರು
ಸಿಂಹವ ಸರ್ಪವ ತಂದವರಿದ್ದರು || ೮೦೫ ||

ವನಚರ ಮೃಗಗಳ ಸಹಿತದಿ ಇದ್ದರು
ಶೂಲದ ಸಹಿತದಿ ಹೋಗುವ ಕುಂಭಗೆ
ಎಡಬಲದಿಂದಲು ಹೂಗಳ ಸುರಿಮಳೆ
ಭೀಮಾಕಾರರು ಕ್ರೂರ ನೇತ್ರರೂ || ೮೦೬ ||

ಆಗಿಹ ರಕ್ಕಸರೆಲ್ಲರು ಸುತ್ತಲು
ಕೂಡಲೆ ಕುಂಭನು ಎಸೆದನು ಒಡವೆಯು
ಗರ್ಜನೆ ಮಾಡಿದ ನಡುಗಿತು ನಗರವು
ದೇಹವ ಬೆಳೆಸಿದ ಬೃಹದಾಕಾರದಿ || ೮೦೭ ||

ದೇಹದ ಸುತ್ತದು ನೂರು ಧನುಸಿನದು
ಎತ್ತರವಿರುತಲಿ ಆರುನೂರು ಧನು
ಕಣ್ಣುಗಳಾದವು ಗಾಲಿಗಳಂತೆಯೆ
ಸುಟ್ಟಿಹ ಬೆಟ್ಟದ ಕಪ್ಪಿನ ತೆರದಲಿ || ೮೦೮ ||

ಗುಡುಗುತ ಅಂದನು ರಕ್ಕಸವೀರರೆ
ಕೊಲ್ಲುವೆ ರಾಮನ ಒಬ್ಬನೆ ಮೊದಲು
ಅಂದರೆ ಯುದ್ಧವು ಮುಗಿಯಿತು ಅಲ್ಲಿಗೆ
ವಾನರರೆಲ್ಲರು ಊಟಕೆ ಮೀಸಲು ‖ ೮೦೯ ‖

ಕೇಳುತ ಈ ನುಡಿ ರಕ್ಕಸರೆಲ್ಲರು
ಗರ್ಜನೆ ಗೈದರು ಗಗನವು ಬಿರಿಯಿತು
ಕುಂಭನು ದ್ವಾರಕೆ ಹೋಗದೆ ಹಾಗೆಯೆ
ಕೋಟೆಯ ದಾಟಿದ ಹೆಜ್ಜೆಯನಿಡುತಲೆ ‖ ೮೧೦ ‖

ಕೋಟೆಯ ಆಚೆಗೆ ವಾನರ ಸೇನೆಯು
ನೋಡಿತು ಇವನನು ನಡುಗಿದರೆಲ್ಲರು
ಚದುರಿತು ಸೇನೆಯು ಓಡಿದರೆಲ್ಲೆಡೆ
ನಳ ನೀಲ ಕುಮುದ ಗವಾಕ್ಷರು ಕೂಡ ‖ ೮೧೧ ‖

ಅಂಗದ ತಡೆದನು ಎಲ್ಲರನವರನು
ಅಂಜುವದೇತಕೆ ಅಲ್ಪರ ತೆರದಲಿ
ರಕ್ಕಸನಿರುವನು ಬೆದರಿನ ಬೊಂಬೆಯು
ವೇಷವ ಕಟ್ಟಿದ ವಿಡಂಬನೆ ಮಾತ್ರ ‖ ೮೧೨ ‖

ನೆನೆಯಿರಿ ನಿಮ್ಮಯ ಶೌರ್ಯವ ಎಲ್ಲರು
ತಿರುಗಿರಿ ಎಲ್ಲರು ಯುದ್ಧವ ಮಾಡಿರಿ
ಕೊಲ್ಲಲು ಅವನನು ಅಶಕ್ಯವಿಲ್ಲವು
ಎನ್ನಲು ತಿರುಗಿದರೆಲ್ಲರು ಯುದ್ಧಕೆ ‖ ೮೧೩ ‖

## ಕುಂಭಕರ್ಣನ ಹಾವಳಿ

ನಡೆಯಿತು ಭೀಕರ ಕದನವು ಆಗಲೆ
ಕುಂಭನ ಹೊಡೆತಕೆ ತಡೆಯದು ಸೇನೆಯು
ಹಿಂಡಿಗೆ ಹಿಂಡೇ ಕಡಿಯುವ ಏಟಿಗೆ
ಓಡಿದರೆಲ್ಲರು ಏನೂ ತಿಳಿಯದೆ || ೮೧೪ ||

ಕಡಲಲಿ ಬಿದ್ದರು ಗಗನದಿ ಜಿಗಿದರು
ಸೇತುವೆ ಮಾರ್ಗದಿ ಹೋದರು ಕೆಲವರು
ಗವಿಯಲಿ ಅವಿತರು ಎಷ್ಟೋ ಕಪಿಗಳು
ಕುಸಿದರು ಎಷ್ಟೋ ಗಾಬರಿಯಿಂದಲಿ || ೮೧೫ ||

ಅಂಗದ ಕೂಗುತ ಹೇಳಿದನಾದರು
ನಿಲ್ಲರು ಯಾರೂ ಯುದ್ಧವ ಮಾಡಲು
ಆದರು ಅಂಗದ ಬಿಡದಲೆ ನಿಲ್ಲಿಸಿ
ತಡೆದನು ಎಲ್ಲರ ಓಟವನಾಗಲೆ || ೮೧೬ ||

ಸೇನೆಯ ಮಧ್ಯದಿ ನಿಂತಿಹ ಹನುಮನು
ಬರುತಲಿ ಸೇರಿದ ಅಂಗದ ಸಂಗಡ
ಇಬ್ಬರ ಪೌರುಷ ನುಡಿಯನು ಕೇಳುತ
ಮರಳಿತು ಸೇನೆಯು ಯುದ್ಧವ ಮಾಡಲು || ೮೧೭ ||

ಕುಂಭನು ನಡೆದನು ಬೀಸುತ ಗದೆಯನು
ಒಂದೇ ಏಟಿಗೆ ಸಾವಿರ ಕಪಿಗಳು
ಒರಗುತಲಿದ್ದರು ರಣದಲಿ ಚೀರುತ
ಕೈಯಲಿ ಸಿಕ್ಕುವ ಕಪಿಗಳನೆಲ್ಲವ || ೮೧೮ ||

ಬಾಯಲಿ ಹಾಕುತ ಮುಕ್ಕುತಲಿದ್ದನು
ಒಂದೇ ಹಿಡಿತಕೆ ಶತಾರ್ಧ ಕಪಿಗಳು
ಸೇರುತಲಿದ್ದರು ರಕ್ಕಸ ಬಾಯನು
ವಾನರ ಮುಖ್ಯರು ರಕ್ಕಸ ವೀರರ || ೮೧೯ ||

ಕೊಲ್ಲುತಲಿದ್ದರು ಒಂದೇ ಸಮನೆ
ಹನುಮನು ಹಾಕಿದ ಶಿಖರದ ತುದಿಯನು
ನೇರಕೆ ಕುಂಭನ ನೆತ್ತಿಯು ಮೇಲೆಯೆ
ರಕ್ತವು ಚಿಮ್ಮಿತು ಕ್ರುದ್ಧನು ಆದನು || ೮೨೦ ||

ಶೂಲದಿ ಹೊಡೆದನು ಹನುಮನ ಎದೆಗೆ
ಚಿಮ್ಮಿತು ರಕ್ತವು ಎದೆಯಲಿ ಅವನಿಗೆ
ಚೀರುವ ಹನುಮನ ನೋಡುತ ರಾಕ್ಷಸ
ಗಣವದು ಮಾಡಿತು ಗರ್ಜನೆ ಹರುಷದಿ || ೮೨೧ ||

ವಾನರ ವೀರರು ಎಲ್ಲರು ಒಮ್ಮೆಲೆ
ಮುತ್ತುತ ಹೊಡೆದರು ಕುಂಭಕರ್ಣನಿಗೆ
ಆದರು ಆಗದು ಏನೂ ಅವನಿಗೆ
ಸಿಟ್ಟಲಿ ಗರ್ಜನೆ ಮಾಡುತ ಕುಂಭನು || ೮೨೨ ||

ಹಿಸುಕಿದ ಋಷಭನ ಗುದ್ದಿದ ಶರಭನ
ಒದ್ದನು ನೀಲನ ಹೊಡೆದ ಗವಾಕ್ಷನ
ಕಾಲಿಲೆ ಚಿಮ್ಮಿದ ಗಂಧಮಾದನನ
ಬಿದ್ದರು ಎಲ್ಲರು ನೆತ್ತರಸಿಕ್ತರು || ೮೨೩ ||

ಹಾಕುತಲಿದ್ದನು ಕಪಿಗಳ ಬಾಯಲಿ
ಬರುತಲೆ ಇದ್ದರು ಮೂಗಿಲೆ ಬಾಯಿಲೆ
ಅಂಗದ ಜಿಗಿಯುತ ಗುದ್ದಿದ ಎದೆಗೆ
ತತ್ತರಿಸುತ್ತಲಿ ಚೇತನ ಪಡೆಯುತ || ೮೩೪ ||

ಗುದ್ದಿದ ಅಂಗದನೆದೆಯಲಿ ಆತನು
ಬವಳಿಯು ಬರುತಲಿ ಬಿದ್ದನು ಅಂಗದ
ನಂತರ ಶೂಲವ ಹಿಡಿಯುತ ಕುಂಭನು
ತೆರಳಿದ ಕೆಣಕಲು ಸುಗ್ರೀವನನ್ನು || ೮೩೫ ||

ಸುಗ್ರೀವನಾಗ ಎದುರಿಗೆ ಬರುತಲಿ
ತೂರಿದ ಬೆಟ್ಟದ ಶಿಖರವ ಎದೆಗೆ
ಬಿದ್ದಿತು ಅದುವೇ ಪುಡಿಪುಡಿಯಾಗುತ
ರಕ್ಕಸರೆಲ್ಲರು ಗರ್ಜನೆಗೈದರು || ೮೩೬ ||

ಸಿಟ್ಟಲೆ ಕುಂಭನು ಎತ್ತಿದ ಶೂಲವ
ಸಾವಿರ ಭಾರದ ತೂಕದ ಶೂಲವು
ಉಕ್ಕಿನ ಶೂಲವು ಅತಿಶಯ ನಿಶಿತವು
ತೂರಿದ ನೇರಕೆ ಸುಗ್ರೀವನೆದೆಗೆ || ೮೩೭ ||

ನೋಡುತ ಹನುಮನು ಕೂಡಲೆ ಇದನು
ನೆಗೆಯುತ ಹಿಡಿಯುತ ಮಧ್ಯದಿ ಅದನು
ಮುರಿದನು ಲಟಲಟ ತೊಡೆಯಲಿ ಅದನು
ವಾನರ ವಾಹಿನಿ ಗರ್ಜನೆ ಮಾಡಿತು || ೮೩೮ ||

**ಕುಂಭಕರ್ಣನು ಸುಗ್ರೀವನನ್ನು ಹೊತ್ತುಕೊಂಡು ಒಯ್ಯುವದು**

ಸಿಟ್ಟಿಲೆ ಕುಂಭನು ಕಿತ್ತನು ಪರ್ವತ
ನೇರಕೆ ಒಗೆದನು ಸುಗ್ರೀವನೆದೆಗೆ
ವಾನರ ರಾಜನು ಏಟನು ತಿನ್ನುತ
ಬಿದ್ದನು ನೆಲದಲಿ ಎಚ್ಚರ ತಪ್ಪುತ ॥ ೮೯ ॥

ಹರ್ಷದ ರಕ್ಕಸ ಗರ್ಜನೆ ಕೇಳಿತು
ಕೂಡಲೆ ಕುಂಭನು ಎತ್ತುತ ದೇಹವ
ಒಯ್ದನು ಹೆಗಲಲಿ ಸುಗ್ರೀವನನ್ನು
ಬೆಟ್ಟದ ಮೇಗಡೆ ಬೆಟ್ಟವು ಕಂಡಿತು ॥ ೮೩೦ ॥

ಹೊರಟನು ಕುಂಭನು ಲಂಕೆಯ ಕಡೆಗೆ
ನಡೆದನು ಹಾಗೆಯೆ ಲಂಕೆಯ ಒಳಗಡೆ
ರಕ್ಕಸರೆಲ್ಲರು ಹೂಗಳ ಸುರಿಯುತ
ಸ್ವಾಗತಗೈದರು ಕುಂಭಕರ್ಣನಿಗೆ ॥ ೮೩೧ ॥

ಸುರಿಸಿದ ಗಂಧದ ಉದಕವು ಕೂಡಾ
ಬಿದ್ದಿತು ವಾನರ ರಾಜನ ಮುಖದಲಿ
ತಂಪಿಗೆ ಕಳೆಯಿತು ಮೂರ್ಛೆಯು ಆಗಲೆ
ತಿಳಿಯಿತು ಇರುವದು ರಕ್ಕಸ ಕೈಯಲಿ ॥ ೮೩೨ ॥

**ಸುಗ್ರೀವನು ಸಾಹಸದಿಂದ ತಿರುಗಿ ಬಂದುದು**

ಕೂಡಲೆ ವಾನರ ರಾಜನು ಏಳುತ
ಕುಂಭನ ಕಿವಿಗಳ ಹರಿಯುತ ಎದ್ದನು
ಸಿಟ್ಟಿಲೆ ಅವನನು ಕುಕ್ಕಿದ ಕುಂಭನು
ಕೂಡಲೆ ವಾನರ ಜಿಗಿದನು ಗಗನಕೆ ॥ ೮೩೩ ॥

ಹಾರುತ ಬಂದನು ರಾಮನ ಕಡೆಗೆ
ಸಿಟ್ಟಲೆ ತಿರುಗಿದ ಕುಂಭನು ಮತ್ತೆ
ಬಂದನು ಯುದ್ಧದ ಭೂಮಿಗೆ ರೋಷದಿ
ನಡೆಸಿದ ಹಾಗೆಯೆ ಹಾವಳಿ ಮತ್ತೆ ॥ ೮೩೪ ॥

ಕಾಲನ ತೆರದಲಿ ಬರುತಿಹ ಕುಂಭನ
ನೋಡುತ ಲಕ್ಷ್ಮಣ ಬಂದನು ಎದುರಿಗೆ
ಬಿಟ್ಟನು ಕೂಡಲೆ ಬಾಣಗಳೇಳನು
ನಟ್ಟವು ಕುಂಭನ ದೇಹದಿ ಅವುಗಳು ॥ ೮೩೫ ॥

ಅಲ್ಲದೆ ಲಕ್ಷ್ಮಣ ಸುರಿಸಿದ ಶರಗಳ
ಆದರು ಲಕ್ಷ್ಯವೆ ಇಲ್ಲವು ಅವನಿಗೆ
ನೋಡುತ ಈ ಪರಿ ಸಿಟ್ಟಿಗೆ ಏಳುತ
ಲಕ್ಷ್ಮಣ ಬಿಟ್ಟನು ಇನ್ನೂ ಶರಗಳ ॥ ೮೩೬ ॥

**ಕುಂಭಕರ್ಣನಿಂದ ಲಕ್ಷ್ಮಣನ ಪ್ರಶಂಸೆ**

ಒಡೆಯಿತು ಕುಂಭನ ಕವಚವು ಆಗಲೆ
ಲಕ್ಷ್ಮಣ ಶರಗಳ ಲೆಕ್ಕಕೆ ತಾರದೆ
ಹಾಗೆಯೆ ಬಂದನು ಮುಂದಕೆ ಮುಂದಕೆ
ಅಂದನು ಆಗಲೆ ಕೇಳೈ ಲಕ್ಷ್ಮಣ ॥ ೮೩೭ ॥

ಭಪ್ಪರೆ ಭಲೆರೇ ಮೆಚ್ಚಿದೆ ನಿನ್ನನು
ಎನ್ನಯ ಎದುರಿಗೆ ಅಂಜದೆ ನಿಂತಿಹೆ
ನಿಂತಿಹೆಯೆಂದರೆ ಅಷ್ಟೇ ಸಾಕು
ಶೂರನೆ ಇರುತಿಹೆ ಸಂಶಯವಿಲ್ಲವು ॥ ೮೩೮ ॥

ಯುದ್ಧದ ಚಳಕವ ತೋರಿದೆ ನೆಟ್ಟಗೆ
ಯುದ್ಧವ ಕೂಡಾ ನೆಟ್ಟಗೆ ಮಾಡಿದೆ
ಎನ್ನನು ಎದುರಿಸಿ ಇಂದ್ರನು ಕಾದನು
ಯಮನೇ ಬಂದರು ಆಗದು ಅವನಿಗೆ || ೪೩೯ ||

### ಶ್ರೀರಾಮನನ್ನು ಮೊದಲು ಕೊಲ್ಲಬೇಕೆಂದು ಕುಂಭಕರ್ಣನ ಅಪೇಕ್ಷೆ

ಶತ್ರುವೆ ಆದರು ಮೆಚ್ಚಿದೆ ನಿನ್ನನು
ಆದರೆ ಕೇಳುವೆ ನಿನ್ನನು ಒಂದನು
ಎನ್ನಯ ಇಚ್ಛೆಯು ಇರುವದು ಒಂದೇ
ರಾಮನ ಕೊಲ್ಲುವದೊಂದೇ ಗುರಿಯು || ೪೪೦ ||

ಅವನನು ಕೊಂದರೆ ಯುದ್ಧವೆ ಮುಗಿಯಿತು
ಆದರು ಯಾರೇ ನಂತರ ಬಂದರೆ
ಎದುರಿಸಿ ಎನ್ನನು ಕೊಲ್ಲುವೆ ಅವರನು
ಕಾರಣ ಹೋಗುವೆ ರಾಮನ ಕಡೆಗೆ || ೪೪೧ ||

ಎನ್ನಲು ಲಕ್ಷ್ಮಣನೆಂದನು ಅವನಿಗೆ
ವೀರಾಗ್ರಣಿಯೇ ಕುಂಭಕರ್ಣನೇ
ನಿಜಕೂ ನಿನ್ನಯ ಮಾತಿದೆ ಸತ್ಯವು
ಇಂದ್ರಗೆ ಕೂಡಾ ದುರ್ಜಯನಿರುತಿಹೆ || ೪೪೨ ||

ನಿನ್ನಯ ಪೌರುಷ ನಿಜಕೂ ಅನುಪಮ
ನೋಡಿದೆನಲ್ಲವೆ ಇಲ್ಲಿಯೆ ನಾನು
ಅಗ್ರಜ ರಾಮನು ಅಲ್ಲಿಯೆ ಇರುವನು
ಧೈರ್ಯದಿ ಸ್ಥೈರ್ಯದಿ ಬೆಟ್ಟದ ತೆರದಲಿ || ೪೪೩ ||

ಬಿಲ್ಲನು ಹಿಡಿಯುತ ನಿಂತಿಹ ನೋಡೈ
ಅಲ್ಲಿಗೆ ಹೋದರೆ ನಿನ್ನಯ ಇಚ್ಛೆಯು
ಪೂರ್ತಿಯು ಆಗುವುದೆಂತೂ ನಿಶ್ಚಯ
ನಡೆದನು ರಕ್ಕಸ ರಾಮನ ಕಡೆಗೆ ॥ ೮೪೪ ॥

### ಶ್ರೀರಾಮ ಕುಂಭಕರ್ಣರ ಯುದ್ಧ

ನೋಡುತ ಇವನನು ರಾಮನು ಕೂಡಲೆ
ಬಿಟ್ಟನು ರೌದ್ರದ ಅಸ್ತ್ರವ ಮೊದಲಿಗೆ
ನಾಟಲು ಎದೆಯಲಿ ಕ್ರೋಧವು ಉಕ್ಕಿತು
ಗರ್ಜನೆಗೈಯುತ ರಕ್ಕಸ ನುಗ್ಗಿದ ॥ ೮೪೫ ॥

ರಾಮನ ಶರಗಳು ಬಂದವು ಸರಸರ
ಅವುಗಳ ಏಟಿಗೆ ನೆತ್ತರ ಚಿಮ್ಮಿತು
ಬವಳಿಯು ಬಂದಿತು ಗದೆಯದು ಸಡಲಿತು
ನಂತರ ಕೈಯಲಿ ಅಸ್ತ್ರವ ತಡೆಯುತ ॥ ೮೪೬ ॥

ಕಪಿಗಳ ಕುಕ್ಕುತ ಮುಕ್ಕುತ ಅವರನು
ಗೈದನು ಅದ್ಭುತ ಕದನವ ಆತನು
ನಂತರ ಒಗೆದನು ಗಿರಿ ಶಿಖರವನು
ರಾಮನ ಮೇಲೆಯೆ ಭರದಲಿ ಆತನು ॥ ೮೪೭ ॥

ಬಾಣವ ಬಿಡುತಲಿ ಪುಡಿಪುಡಿಮಾಡುತ
ನಡುವೆಯೆ ತಡೆದನು ಪರ್ವತ ಶಿಖರವ
ಸಿಟ್ಟಿನ ಭರದಲಿ ಕುಂಭಕರ್ಣನು
ತಿಂದನು ವಾನರ ರಕ್ಕಸರೆಲ್ಲರ ॥ ೮೪೮ ॥

## ವಿಭೀಷಣನಿಗೆ ಕುಂಭಕರ್ಣನ ಸಲಹೆ

ಆಗಲೆ ಬಂದನು ವಿಭೀಷಣ ನಡುವೆ
ಗದೆಯನು ಹಿಡಿಯುತ ತಡೆದನು ಅಣ್ಣನ
ಕುಂಭನು ಅಂದನು ತಮ್ಮನೆ ಕೇಳೈ
ತಡೆಯುವದೇಕದು ಹೊಡೆಯೈ ಎನ್ನನು || ೮೪೯ ||

ಯುದ್ಧದಿ ಕ್ಷತ್ರಿಯ ಧರ್ಮವ ಪಾಲಿಸು
ಸೋದರ ಸ್ನೇಹವ ಚಿಂತಿಸಬೇಡಾ
ರಾಮನ ಆಶ್ರಯ ಪಡೆದುದು ಒಳಿತೇ
ನಾನೇ ಮಾಡುವದನ್ನೇ ಮಾಡಿದೆ || ೮೫೦ ||

ರಕ್ಕಸ ಜನರಲಿ ಧಾರ್ಮಿಕ ನೀನೇ
ಎಮ್ಮಯ ವಂಶದ ವೃದ್ಧಿಗೆ ನೀನೇ
ರಕ್ಕಸ ರಾಜ್ಯವ ನೀನೇ ಭೋಗಿಸು
ಎನ್ನಯ ಎದುರಿಗೆ ಬರಲೇ ಬೇಡಾ || ೮೫೧ ||

ಯುದ್ಧದಿ ಎನ್ನಯ ಬುದ್ಧಿಯು ಕೆಟ್ಟಿದೆ
ಗೊತ್ತಿದೆಯಲ್ಲವೆ ಎನ್ನಯ ಸ್ವಭಾವ
ನಿನ್ನನು ಎಂದೂ ಕೊಲ್ಲೆನು ನಾನು
ಹೋಗೆಲೊ ಆ ಕಡೆ ಎದುರಿಗೆ ಬೇಡಾ || ೮೫೨ ||

ಸರಿದನು ಆಗಲೆ ವಿಭೀಷಣ ಕೂಡ
ಕುಂಭನು ಭರದಲಿ ರಾಮನ ಎದುರಿಗೆ
ನಡೆದನು ಭೀಕರ ಗರ್ಜನೆ ಮಾಡುತ
ರಾಮನ ನೋಡುತ ಕೇಕೆಯ ಹಾಕಿದ || ೮೫೩ ||

ಶ್ರೀರಾಮ-ಕುಂಭಕರ್ಣರ ಭೀಕರ ಕದನ

ರಾಮನು ಬಿಟ್ಟನು ಬಾಣದ ಸರವನು
ಕುಂಭಗೆ ಆಗದು ಏನೂ ಆದರಿಂ
ಗಣಿಸಲೆ ಇಲ್ಲಾ ವೇದನೆ ಇಲ್ಲಾ
ಮುದ್ಗರ ಬೀಸುತ ತಡೆದನು ಶರಗಳ ॥ ೮೫೪ ॥

ರಾಮನು ಬಿಡುತಲಿ ವಾಯುವ್ಯಾಸ್ತ್ರವ
ಕಡಿದನು ಮುದ್ಗರ ಸಹಿತದ ತೋಳನು
ಬಿದ್ದಿತು ಅದುವೇ ಸೈನ್ಯದ ಮಧ್ಯದಿ
ಬುಡದಲಿ ಸತ್ತರು ಸಿಕ್ಕಿಹ ಯೋಧರು ॥ ೮೫೫ ॥

ಆದರು ಕುಂಭನ ಶೌರ್ಯವು ಕುಗ್ಗದು
ಒಂದೇ ಕೈಯಲಿ ಯುದ್ಧವ ನಡೆಸಿದ
ರಾಮನು ಬಿಡುತಲಿ ಐಂದ್ರಾಸ್ತ್ರವನು
ಕಡಿದನು ಉಳಿದಿಹ ಎರಡನೆ ಕೈಯನು ॥ ೮೫೬ ॥

ರಾಮನು ಬಿಡುತಲಿ ಚಂದ್ರಾಸ್ತ್ರಗಳನು
ಕಡಿದನು ಆಗಲೆ ಕಾಲುಗಳೆರಡನು
ಆದರು ಬಿಡದಲೆ ರಕ್ಕಸನಾಗಲೆ
ಬಾಯನು ತೆರೆಯುತ ತೆವಳುತ ಸರಿದನು ॥ ೮೫೭ ॥

ರಾಮನ ನುಂಗಲು ಸಾಧ್ಯವು ಆದರೆ
ರಾಮನು ತುಂಬಿದ ಕುಂಭನ ಬಾಯನು
ಬಾಣಗಳಿಂದಲೆ ಆಸ್ಪದ ಬಿಡದಲೆ
ಕೊನೆಯಲಿ ಬಿಟ್ಟನು ಐಂದ್ರಾಸ್ತ್ರವನೂ ॥ ೮೫೮ ॥

## ಕುಂಭಕರ್ಣನ ವಧೆ

ಗಾಳಿಯ ವೇಗವು ಅಗ್ನಿಯ ತೇಜವು
ವಜ್ರಾಯುಧದಿಂ ಅಜೇಯವಾಗಿಹ
ಮಿಂಚುತ ಹೋಯಿತು ಶಿರವನು ತರಿಯಿತು
ಪುಟಿಯುತ ಶಿರವದು ಏರಿತು ಗಗನದಿ ॥ ೮೪೯ ॥

ಹಾರುತ ಹಾಗೆಯೆ ಲಂಕೆಯ ಮೇಲಕೆ
ಬಿದ್ದಿತು ಲಂಕೆಯ ಗೋಡೆಯ ಒಳಗಡೆ
ರಭಸದ ಹೊಡೆತಕೆ ಉರುಳಿತು ಬುರುಜು
ದೇಹವು ಬಿದ್ದಿತು ಸಾಗರದೊಳಗೆ ॥ ೮೫೦ ॥

ಕುಣಿದರು ಜಿಗಿದರು ವಾನರರೆಲ್ಲರು
ಓಡುತ ಹೋದರು ರಾಕ್ಷಸರೆಲ್ಲರು
ಲಂಕೆಗೆ ಮುಟ್ಟಿತು ಯುದ್ಧದ ಸುದ್ದಿಯು
ರಾವಣ ಮುಖವದು ಆಯಿತು ಕರ್ರಗೆ ॥ ೮೫೧ ॥



# ಒಪ್ಪೋಲೆ

| ಶ್ಲೋಕ | ಸಾಲು | ತಪ್ಪು | ಒಪ್ಪು |
|---|---|---|---|
| ೫೭ | ೪ | ಮುಂದಿವ | ಮುಂದಿನ |
| ೬೬ | ೧ | ನಿಶ್ಚಿತನಾಗಿ | ನಿಶ್ಚಿಂತನಾಗಿ |
| ೨೦೯ | ೧ | ಒಳ್ಳೆಯ | ಒಳ್ಳೆಯು |
| ೨೫೯ | ೩ | ಲಕ್ಷಣ | ಲಕ್ಷ್ಮಣ |
| ೨೭೬ | ೧ | ದಾಡಲು | ದಾಟಲು |
| ೩೪೭ | ೧ | ಗವಯನು | ಗವಯನ |
| ೪೨೧ | ೪ | ಟಲ್ಲೆನು | ಬಲ್ಲೆನು |
| ೪೨೯—೪೩೦ರ ನಡುವಿನ ಸಾಲು | | ನಡಿ | ನುಡಿ |
| ೪೩೬ | ೧ | ಮೋಡಗಳಲ್ಲಡೆ | ಮೋಡಗಳೆಲ್ಲೆಡೆ |
| ೪೭೪ | ೪ | ಕೋಸಲರಾಜ್ಯದ | ಕೋಸಲರಾಜ್ಯವ |
| ೪೯೭ | ೪ | ಮಬ್ಣನು | ಮಣ್ಣನು |
| ೫೬೬ | ೨ | ಸುಗ್ರಿವುನೆಂದ | ಸುಗ್ರೀವನೆಂದ |
| ೫೮೬ | ೩ | ವಿಷಯ | ವಿಷಯುವ |
| ೬೪೯ | ೧ | ಸೇನೆಯು | ಸೇನೆಯು |
| ೭೦೫ | ೧ | ಬಳಲಿದೆ | ಬಳಲಿಹೆ |

# ಲೇಖಕರ-ಪರಿಚಯ

(ಶ್ರೀ ನಾರಾಯಣರಾವ ತಾಳಿಕೋಟಿ)

ಮಾನವನ ಅಂತರಂಗ-ಬಹಿರಂಗಗಳ ಬಣ್ಣ ಒಂದೇ. ಆದಾಗ ಅವನೋರ್ವ ಸಾಧಕನಾಗಿ, ಸಿದ್ಧನಾಗಿ ಸಮಾಜಕಲ್ಯಾಣಕಾರ್ಯದಲ್ಲಿ ನಿರತನಾಗಿ ಯಶಸ್ವಿಯಾಗುತ್ತಾನೆ. ಅಂತಹ ಸಿದ್ಧಪುರುಷನೇ ನಿಜವಾದ ಕವಿ. ಶ್ರೀಮಾನ್ ನಾರಾಯಣರಾಯರು ಇಂತಹ ಶ್ರೇಷ್ಠ ಕವಿಗಳಲ್ಲಿ ಒಬ್ಬರು.

"ಮೋಹಮುದ್ಗರ" ಹಾಗೂ "ರಾಮಾಯಣ ಸುಧೆ" ಎಂಬ ಕೃತಿಗಳು ಇವರ ದಾರ್ಶನಿಕತೆಗೆ ಕನ್ನಡಿ ಹಿಡಿಯುವಂತಿವೆ ಶ್ರೀ ಶ್ರೀ ಚನ್ನಬಸವಸ್ವಾಮಿಗಳ ಪ್ರಣವನಾದ ಕೃತಿಯು ಇವರ ಇಂಗ್ಲೀಷ ಅನುವಾದವು ವಚನಸಾಹಿತ್ಯಕ್ಕೊಂದು ಕೊಡುಗೆ ಎಂದೇ ಹೇಳಬೇಕು.

ಆರ್ಯ ಸ್ತ್ರೀ ಸೀತಾಮಾತೆ, ಯಾಜ್ಞವಲ್ಕ್ಯ ಹಾಗೂ ಮಾಸತಿಕಲ್ಲು ಇವರ ಐತಿಹಾಸಿಕ ಸಂಶೋಧನೆಯ ಅಮೃತ-ಫಲಗಳು. ಮಕ್ಕಳಿಗಾಗಿ ಬರೆದ ಚಿಕ್ಕ ಹೊತ್ತಿಗೆ "ಬಭ್ರುವಾಹನ" ಶಿಶುವೃಂದಕ್ಕೆ ನಲಿವನ್ನುಂಟು ಮಾಡಿದೆ ಇವರ ಪ್ರಥಮ ಕಾಣಿಕೆ "ರಾಗಿಣಿ" ಕವನ ಸಂಕಲನವು ಸಾಮಾಜಿಕ, ರಾಜಕೀಯ ಲೋಪದೋಷಗಳನ್ನೆತ್ತಿ ತೋರಿಸಿ ಮಾರ್ಗದರ್ಶನ ಮಾಡುತ್ತದೆ.

'ಸುಕುಮಾರ' ಎಂಬ ಕಾದಂಬರಿ ಸಮಾಜದ ಹಲವು ಮುಖಗಳ ಪರಿಚಯ ನೀಡುತ್ತದೆ. ಓರ್ವ ದಲಿತನು ಸ್ವಪ್ರಯತ್ನದಿಂದ ನಿಷ್ಠೆಯಿಂದ ಮಹಾ ವ್ಯಕ್ತಿ ಆಗಬಲ್ಲನೆಂಬ ವಿಶ್ವಸತ್ಯವನ್ನು ಪ್ರತಿಪಾದಿಸಲಾಗಿದೆ.

ಇವರ ಕನ್ನಡ ಭಗವದ್ಗೀತೆ ಪಂಡಿತ-ಪಾಮರರೀರ್ವರನ್ನು ಕೃತಾರ್ಥಗೊಳಿಸಿದೆ. ವಾಲ್ಮೀಕಿ ರಾಮಾಯಣ, ವ್ಯಾಸ ಭಾರತಗಳೆರಡನ್ನು ಕನ್ನಡಕ್ಕೆ ತರಬೇಕೆಂಬ ಇವರ ಆಶೆ ಆಂಶಿಕವಾಗಿ ಈಡೇರಿದೆ. ರಾಮಾಯಣದ ಮೂರು ಸಂಪುಟಗಳು ಓದುಗರಿಂದ ಪ್ರಶಂಸಿತವಾಗಿವೆ.

ನುಡಿದಂತೆ ನಡೆ, ನಡೆ-ನುಡಿಗಳಂತೆ ಸಾಹಿತ್ಯ-ಸೃಷ್ಟಿ ಎಲ್ಲವೂ ಶುದ್ಧ ಸಾತ್ವಿಕ, "ನಾನೃಷಿ ಕುರುತೆ ಕಾವ್ಯಂ" ಕಾವ್ಯಶ್ರೀ ವರಪಡೆದ ಇವರು ಧನ್ಯರು. ಕನ್ನಡಮ್ಮ ಧನ್ಯಳು, ನಾವೆಲ್ಲ ಧನ್ಯರು—

ವ್ಹಿ. ಎಸ್. ಕಾಂತನವರ
ಸಂಚಾಲಕ, ರವೀಂದ್ರ ಪ್ರಕಾಶನ